## ಅ ರ್ಪ ಣ

ರಸಿಕಮಿತ್ರರೂ ಸ್ವತಃ ಕವಿಗಳೂ ವಿಮರ್ಶಕರೂ ಆಗಿದ್ದ
ದಿವಂಗತ **ಪುರುಷೋತ್ತಮ ಲಾಡ** ಅವರ
ಸಸ್ನೇಹ ಸ್ಮೃತಿಗೆ

**ದ. ರಾ. ಬೇಂದ್ರೆ**

# ಪರಿವಿಡಿ

| ಕವನ | ಪುಟ |
|---|---|

# ಮೊದಲ ಮಾತು

‘ ಅರಳು-ಮರಳಿ ’ನ ಪಂಚಕಾವ್ಯ ಗುಚ್ಛಗಳ ಸಂಪುಟ ಪ್ರಕಾಶ ವಾದ ಮೇಲೆ ಬಹು ಬೇಗನೆ ‘ ನಮನ ’ದ ಈ ಸಂಗ್ರಹ ಬರುವದಕ್ಕೆ ರಸಿಕರಾದ ವಾಚಕರ ಒಲವಿನಷ್ಟೇ ಪ್ರಕಾಶಕರ ಪ್ರೇರಣೆಯೂ ಕಾರಣ ವಾಗಿದೆ. ಈ ಸಂಗ್ರಹದೊಳಗಿನ ಕವನಗಳು ನನ್ನ ಬೇರೆ ಕೆಲವು ಸಂಗ್ರಹ ಗಳಂತೆ ಸಂಕೀರ್ಣ ಸ್ವರೂಪದ್ದಾಗಿದೆ. ಬಹಳ ಪೂರ್ವದಲ್ಲಿಯೇ ಬರೆದು ಪ್ರಕಟವಾಗದ, ಪ್ರಕಟವಾಗಿಯೂ ಸಂಗ್ರಹದಲ್ಲಿ ಬಾರದ, ಆಕಾಶವಾಣಿ ಯವರ ಆಶ್ರಯದಲ್ಲಿ ಬಿತ್ತರಿಸಿದ ಪದ್ಯಗಳಲ್ಲದೆ, ಅಪ್ರಕಾಶಿತವಾದ ಹೊಚ್ಚ ಹೊಸ ಕವನಗಳೂ ಇವೆ. ರಸಿಕರಿಗೂ, ವಿಮರ್ಶಕರಿಗೂ, ಕವಿಮಿತ್ರ ರಿಗೂ ಈ ಸಂಗ್ರಹದೊಳಗಿನ ಹಲಕೆಲವು ಕವನಗಳು ರುಚಿಭೇದದಿಂದ ಪ್ರಿಯವಾಗುವವೆಂದು ನಾನು ನಂಬಿದ್ದೇನೆ. ಬಾನುಲಿಯ ಖಾತೆಯವ ರಿಗೂ ಪ್ರಬುದ್ಧ ಕರ್ನಾಟಕ, ಜೀವನ, ಕನ್ನಡ ನುಡಿ, ಸ್ವಧರ್ಮ, ನವ ಚೇತನ ಮೊದಲಾದ ಪತ್ರಪತ್ರಿಕೆಗಳ ಸಂಪಾದಕರಿಗೆ, ಪ್ರಕಾಶಕರಿಗೆ ನಾನು ಋಣಿಯಾಗಿದ್ದೇನೆ.

ಚಿ. ವಾಮನನು ಈ ಸಂಗ್ರಹಕ್ಕಾಗಿ ಹಸ್ತಪ್ರತಿಯನ್ನು ಸಿದ್ಧಪಡಿಸಿ ದ್ದಾನೆ. ಎಂದಿನಂತೆ ಶ್ರದ್ಧೆ ವಹಿಸಿ ಈ ಸಂಗ್ರಹವನ್ನೂ ಮುದ್ದಾಗಿ ಮುದ್ರಿ ಸಿದ್ದಕ್ಕೆ ಪ್ರತಿಭಾ ಮುದ್ರಣದ ಕಾರ್ಯಕರ್ತರೆಲ್ಲರೂ ಅಭಿನಂದನೆಗೆ ಪಾತ್ರ ರಾಗಿದ್ದಾರೆ.

ಸಾಧನಕೇರಿ
ಗುರುದ್ವಾದಶಿ
೧೯೫೮

**ದ. ರಾ. ಬೇಂದ್ರೆ**

# ೧. ಸೌಭಾಗ್ಯದರ್ಶನ

ಈ ಸೃಷ್ಟಿ ಭಗವತ್‌ದೃಷ್ಟಿ ! ಇದರಿಂದಲೇ ಭವಬಂಧ ।
ಅಭವಗಿದು ಮುಕ್ತಚ್ಛಂದ ; ಮುಕ್ತ-ಭಕ್ತ-ಪ್ರಬಂಧ
ಬರಿ ನಿಸರ್ಜನವಲ್ಲ, ಮಲವಿಸರ್ಜನವಲ್ಲ....

೦ ೦ ೦ ೦

**ವೇದೋಕ್ತಿ**

ಭಗ ಏವ ಭಗವಾನ್ ಅಸ್ತು ದೇವಃ ।
ತೇನ ವಯಂ ಭಗವಂತಃ ಸ್ಯಾಮ ॥

**ಋಷ್ಯುಕ್ತಿ**

ಭದ್ರಂ ವದ ದಕ್ಷಿಣತೋ ಭದ್ರಮುತ್ತರತೋ ವದ
ಭದ್ರಂ ಪುರಸ್ತಾನ್ನಾವದ ಭದ್ರಂ ಪಶ್ಚಾತ್ ಕಪಿಂಜಲ ॥

೦ ೦ ೦ ೦

ಅವತಾರ ಯೋಜಿತೆಯು
ಋತುರಾಜ ಪೂಜಿತೆಯು
ಭೂದೇವಿ, ಭಾಗ್ಯಕ್ಕೆ ಚೇರಿ ಹೊಣೆಯೇ ?
ಉಡುಗಣ ವಿರಾಜಿತೆಯ
ನಿಶಿರಾಜ ರಾಜಿತೆಯ
ಕುವರಕುವರಿಯರ ಸೌಭಾಗ್ಯಕೆಣೆಯೇ !

ಆದರೂ ಮಾನವನ
ಮನವೆ ಮನುಜನ ವೈರಿ—
ಏನು ವಿಧಿಯೋ ? ಶನಿಯೊ ? ಕಷ್ಟಕಾಲ !
ಏಳಲಿದೆ ಆ ಸತ್ತ್ವ
ಕೇಳಿಸಿದೆ ಪರತತ್ತ್ವ
ರಾಹು ದಾಟಿಹುದು— ಉಳಿದಿಹುದು ಬಾಲ.

೦ ೦ ೦ ೦

## ನಮನ

ತನಗೆ ಕಂಡದ್ದೆ ಕಣಿಯೆಂಬ ಗೂಗೆಗಳ ಘೂತ್ಕಾರ
ಹೆಣದಾಸೆಯಿಂದ ಹಸಿವೆಂದು ಗೋಗರೆವ ಭೂತಗಳ ಚೀತ್ಕಾರ,
ವಿದ್ವೇಷ ಬಂಧವನೆ ಸಂಬಂಧವೆಂದೆನುವ
ಸರ್ಪಗಳ ಫೂತ್ಕಾರ, ಮುನಿದಥರ್ವಣರ-
ಪಾಪಪಾಶದ ಗಂಟು ಹಾಕಿ ಶಾಪವನೆಸೆವ
ಥೀಥೂತ್ಕಾರ—' ಲವ್‌ಲಗಾಟಾಯ ಸ್ವಾಹಾ ' ಎನುವ
ಕಾಕು ಪ್ರೋಕರ ಮಂತ್ರ.....
ಮಾನವರ ಮಿದುಳು ಕೃತ್ರಿಮಕೆ—ಕಲ್ಪಿತ ಯಂತ್ರ
ರಾಯಿಟ್ ಲೆಫ್ಟ್, ಲೆಫ್ಟ್ ರಾಯಿಟು
ಎಂಬ ಕವಾಯತಿನ ದೀರ್ಘಸೂತ್ರದ ತಂತ್ರ
ವಿಪರೀತ ರತಿಯ ನಡೆಸಿದೆ.
ವಸ್ತ್ರಂ ದೇಹಿ, ಅನ್ನಂ ದೇಹಿ, ಆಶ್ರಯಂ ದೇಹಿ.
ದೇಹಂ ದೇಹಿ, ಗೇಹಂ ದೇಹಿ, ಸ್ನೇಹಂ ದೇಹಿ
ಓ, ದೇಹಿ, ಸಂದೇಹಿ, ' ಭವತಿ ಭಿಕ್ಷಾಂ ದೇಹಿ ! '
ಅಚ್ಛ ಉದರಂಭರಣ ನಿನ್ನ ಅಂತಃಕರಣ
' ದೇಹಿ ' ಎನುವುದೆ ಮರಣ, ನಿನಗೆ ಸಾವೇ ಶರಣ
ಯಾರಂದರೋ ಏನೊ ' ದೇಹೀ ನಿತ್ಯಂ ಅವಧ್ಯೋಯಂ
ದೇಹೇ ಸರ್ವಸ್ಯ ಭಾರತ '
' ಜೀವಿತವು ವಿಕೃತಿ, ಮರಣವೆ ಪ್ರಕೃತಿ '
ಎಂದ ನೊಂದಾ ಕವಿಯು—
ಪೌರುಷದ ಸಂಸ್ಕೃತಿಯು ಯಾವುದಿದೆಯೋ ?

ೱ ೱ ೱ ೱ

ಪಡುವವರು ಎದೆಯಲ್ಲಿ ನಡುವವರು
ಪಟ್ಟವರು ಮತ್ತೆ ಹಿಮ್ಮೆಟ್ಟುವರು
ಪಡೆದವರು ರುದ್ರನಾ ದವಡೆಯಲಿ ನಡೆದವರು

## ನಮನ

ಯಮನ ಶ್ರಾದ್ಧವ ಮಾಡಲೆಂದು ತಡೆದವರಾರು
ಆತ್ಮಶ್ರದ್ಧೆಯಲಿ ?
ಓ—ಚೈತ್ರ ವೇದವನೋದಿ, ಮಧುಮಂತ್ರವನ್ನೂದಿ
ಬಂತು ಒಲಿವಿನ ದೂದಿಯಾಗಿ ಕಾಮನ ಬೂದಿ
ಹರಗೌರಿ ದೃಷ್ಟಿಯಲಿ ಸೃಷ್ಟಿಯಾಗಿ
ಭೌಮ ವೃಷ್ಟಿಯಾಗಿ
ಥೂತ್—ಥೂತ್—
ಸೃಷ್ಟಿಯೇ ದುರ್ಬಂಧ; ಆ ಅಭಾವದ ಮುಕ್ತಿ
ತಾ ನಿಸರ್ಗದ ಛಂದ, ಕರ್ಮವದು ದುರ್ಗಂಧ
ಎಂದು ಪ್ರಕೃತಿಯನೆ ವಿಕೃತಿ ಕ್ಷೇತ್ರವೆನೆ
ಅನುಗೊಳಿಸಿ, ಮಸಣವೆ ಮಹಾ ತೀರ್ಥ
ಎನುವಂತೆ ದೇಹವನು ನಿಂದಿಸುತ, ದೇಹಿಯ
ವಿಡಂಬಿಸುತ, ನಾಚಿ ಸಾಯುವಹಾಗೆ ಹೆಣ್ಣನ್ನು
ಏಡಿಸುತ, ಪಾರ್ಥಿವತೆಯನ್ನು ಮಣ್ಣೆಂದು
ಜರೆ ಜರೆದು, ರೂಪವನು ಮೋಹಪಾಶವದೆಂದು
ಎಣಿಸುತ್ತ, ವಿದ್ರೂಪವನ್ನೆ ಸಾರ್ಥಕವೆಂದು
ವಾದಿಸುವ, ಬೀಭತ್ಸಕ್ಕೆ ರಸರಾಜಪಟ್ಟವನು
ಕಟ್ಟಿ ರೌದ್ರ ಕಾರುಣ್ಯವನೆ ರುಚಿಗೊಳಿಸಿ
ಭಕ್ತಿಯಲಿ ಭಯಕಿಂಬುಮಾಡಿ, ವೈರದದ್ಭುತ
ದಲ್ಲಿ, ಉಪಹಾಸ, ಅಪಹಾಸ್ಯ, ಕಟಕಿ
ಮೂದಲಿಕೆಗಳ ಚತುರೋಕ್ತಿ ವೈದಗ್ಧ್ಯ
ಪಸರ ವೈಚಿತ್ರ್ಯಕ್ಕೆ ಮನ ಮಾರುಗೊಟ್ಟು
ತಾಂಡವಿಸುತಿದೆ ಚೋದ್ಯ ತರ್ಕಮರ್ಕಟ ಲೀಲೆ
ಸ್ವೈರ ವಿಹರಿಸುವ ಈ ನಕ್ಷತ್ರಗಳ ಸಂತೆಯಲಿ
ಮನುಜ ಯಾವ ಪದಾರ್ಥ ?

## ನಮನ

ಎಲ್ಲವು ಆಕಸ್ಮಾತ್ತು; ಒಳಿತು ಕೆಡಕೆಂಬುದೆಲ್ಲ ಭ್ರಾಂತು.
ಎನುವಂತೆ— ಇವರ ಸಿದ್ಧಾಂತ.
ಪ್ರಳಯಮುಖವೋ ದ್ವಂದ್ವ
ಸೃಷ್ಟಿಮುಖ ದಾಂಪತ್ಯ
ಪೂರ್ಣದಿಂ ಪೂರ್ಣಕ್ಕೆ ಹಿಗ್ಗುತಿದೆ— ಸಾಹಿತ್ಯ.
ಸೌಭಾಗ್ಯ ಕಾಣುವುದು ಬೇರೆ ಕಣ್ಣೋ? ಏನು ಮಣ್ಣೋ!
ಪಾಕ ಹಪಗೆಟ್ಟಿಹುದು, ನಾಗ ವಿಷ ಕಾರುತಿದೆ
ನಕ್ರವೋ ಗಜವನ್ನೆ ಪೀಡಿಸುತಿದೆ
ಪಾಕಶಾಸಕನೆಲ್ಲಿ? ನಾಗಪಾಶಕನೆಲ್ಲಿ!
ಗಜ— ಗೌರಿ ಮಿತ್ರನಿಗೆ ಸಿಪ್ರೆ ಏನೋ?
ಮಾಂಗಲ್ಯಸೂತ್ರವನೆ ಪಾತ್ರಮಾಡಿಸುತಿರಲು
ಕಂಗೆಟ್ಟ ಹೆಣ್ಣುಸಿರು ರಣದ ಭೇರಿ
ಬಂಗಾರ ಲಂಕೆಗೂ ಮಂಗ ಇಟ್ಟಿತು ಬೆಂಕಿ
ಅಂಗಾಲ ಕಣ್ಣ ಉರಿ ನೆತ್ತಿಗೇರಿ.

ಇತ್ತಿಹುದು ಕೊಡದ ಕೈ, ಅತ್ತಿಹುದು ಕಣ್ಣೀರು
ಸುತ್ತಲೂ ಅನ್ನದಲೆ ಪ್ರಳಯದ ಕಸ
ಬಿತ್ತಿರುವ ಬಲೆಗಳಲಿ ಹೊತ್ತಿರುವ ಒಲೆಗಳಲಿ
ತುತ್ತು ಗಂಟಲಿಗೆ ಗಾಳದ ಆಮಿಷ.

ಭಾರತಿಯ ದ್ವಾರದಲಿ ಆರತಿಯನಂಟಿಸಿದೆ
ಮಾರುತರ ಹಾವಳಿಯ ಇರುಳಿನಲ್ಲಿ
ಜಾರುತಿವೆ ಜಾವಗಳು ಹಾರುತಿವೆ ಭಾವಗಳು
ಮೂರುತಿಯು ಮಾಟವಿದೆ ಕರುಳಿನಲ್ಲಿ.

○ ○ ○ ○

# ನಮನ

ಅನ್ನ ಕೊಟ್ಟಣ್ಣನಿಗೆ ಬರಲಿ ಶಾಶ್ವತ ಭಾಗ್ಯ
ಮನೆ ಮನೆಗೆ ಇರಲಿ ಮಣಿದೀಪ ಎಂದಾಕೆ

‘ಬಡತಾನ ಇದ್ದಽರು ಭಾಷೆ ಮಕ್ಕಽಳಿರಲಿ
ಕಡೆತನಕ ನಿನ್ನ ದಯವಿರಲಿ, ಹೇ ಗುರುವೆ
ಬಡತನದ ಚಿಂತೆ ನಿನಗಿರಲಿ.’ (ಜಾನಪದ ಧ್ವನಿ)
ಕಾಯಕವು ಒಟ್ಟಿರಲಿ ಕಲ್ಯಾಣ ಕಟ್ಟಿರಲಿ
ನಾಯಕರು ತೊಟ್ಟಿರಲಿ ಧರ್ಮ ಪಂಥ
ಮಾಯೆ ಹಿಮ್ಮೆಟ್ಟಿರಲಿ, ಕಾಯ ಭುಜ ತಟ್ಟಿರಲಿ
ತಾಯ ಎದೆಯಲ್ಲಿರಲಿ ‘ಸ್ವಸ್ತಿ’ ವಚನ.
ಹಳ್ಳದಾ ದಂಡೆಯಲಿ ಹಳ್ಳಿ ಹಲವಾರಿರಲಿ
ಹೊಲದಲ್ಲಿ ಪಯಿರಿರಲಿ, ಪಚ್ಚೆಪವಳ
ಹಯನಿರಲಿ ತೊಟ್ಟಿಯಲಿ, ಕೂಸಿರಲಿ ತೊಟ್ಟಿಲಲಿ
ಹೆಣ್ಣಾಂಡು ಒಪ್ಪಂದ ನಿಚ್ಚನಿವಳ

ಗುಡಿ ಗಂಟೆ ಬಾರಿಸಲಿ
ಗುರುಗಳು ನಿವಾರಿಸಲಿ
ಸಂಶಯದ ಗಂಟುಗಳ ಬಿಚ್ಚಿ ಬಿಡಿಸಿ
ಜೀವನವು ಕಲೆಯಿಂದ
ಕಲೆಯು ಜೀವನದಿಂದ
ಪುಟಗೊಂಡು ಬರಲಿ ದುರ್ಭಾಗ್ಯ ಕೆಡಿಸಿ.

ಕರಿಮಣಿಯ ಮಾಂಗಲ್ಯ ತಾಳಿಯೋಲೆ
ಕುಂಕುಮದ ಸಿಂಗಾರ ಹಣೆಯ ಮೇಲೆ
ಸುತ್ತು ಕಾಲುಂಗುರವು, ಮೀನಪಿಲ್ಲೆ
ಹಸಿರು ಕಂಕಣ, ಕಣ್ಣು ಕಾಡಿಗೆಯು ನಲ್ಲೆ

## ನಮನ

ಮುಡಿದ ಹೂವಿಗು ಮಿಗಿಲು ಮುಡಿಯ ಹೂವು
ತುಟಿ ನಗೆಯೊಳಿರುವ ಮಲ್ಲಿಗೆಯು ಮಾವು.
ಹೊಸ್ತಿಲಕೆ ರಂಗೋಲೆ, ಬಾಗಿಲಿಗೆ ತೋರಣವು
ಓರಣದ ಕಾರಣೆಯು ಹಣತೆ ನೊಡರು
ಸಂಜೆ ಸೋಬಾನೆಗಳ ಇಂಪುದನಿ ಮನೆಯಲ್ಲಿ
ಈ ಚಿತ್ರ ಕಂಡು ಸೊಗವಾರು ಪಡರು ?

o o o o

ಮುತ್ತೈದೆ, ಏಳು ಮಕ್ಕಳ ತಾಯಿ–ಗಾಳಿಯಲಿ ಲಾಲಿ ಹಾಡುತ್ತಿಹಳು.
ಧ್ಯಾನಿಗಳ ಮೌನಮುದ್ರೆಯ ನೊಡೆದು ಕೇಳಬರುತಿದೆ
ಸೊಲ್ಲು ' ಸೋ ' ಎಂದು

ಸಪ್ತಗ್ರಹಗಳ ಮತ್ತೆ ಸುಪ್ತಗ್ರಹಗಳ ತೆರಸಿ
ಯಾವುದೋ ಭೃಂಗ-ಗುಂಜಾರವವು ನಿಶಿದಿನವು
ಉನ್ನಿದ್ರ ಉನ್ಮನದ ಚಿಗುರು ಪಲ್ಲವಿಯಂತೆ
ಸ್ವರವೆತ್ತಿ ಕೊಡುತಲಿದೆ, ಧ್ರುವದ ಆಕರ್ಷಣೆಗೆ
ಸ್ಪಂದಿಸುತ್ತಿಹ ಬುವಿಯ ಜೀವನಾಡಿಯ ಗತಿಯ
ವಿಜ್ಞಾನ ರಾಗದಲಿ ಆನಂದ ಭೈರವಿಯ ಧ್ವನಿಸುತಿದೆ
ಜೀರ್ಣ ವಿರಾಗವಡಗುತಿದೆ ದೂರ ನೀಲಾಂಬರದಿ.

ನಿರ್ಗತಿಕಳಲ್ಲ ಈ ಭೂಮಿ
ದುರ್ಗತಿಗೆ ಈಡಲ್ಲ ಈ ಮಾನವ ಜಾತಿ
ತ್ರಿಗುಣ ತಿರುಗಣೆ ಮಡುವಿನಲಿ, ಸಭ್ಯತೆಗಳರಳಿದವು.
ಉರುಳಿದವು ನಾಗರಿಕತೆ,
ಮತ್ತೆ ಬಂದಿದೆ ಇಂದು, ನವ ವಿಚಾರ ಪ್ರಳಯ.

ಜಗದ ನೆತ್ತಿಯಲಿಹುದು ಸೌಭಾಗ್ಯಬಿಂದು
ವಿಧು ಬಿಂಬ ಸಿಂಧು ಸಿಂಧೂರದೊಲು, ಸೀಮಂತರೇಖೆಯಲಿ.

## ನಮುನ

ಕತ್ತಲೆಯ ಎದೆಯಲ್ಲು ಕೆಂಪು ರಕ್ತವೆ ಉಂಟು,
ಕುಂಕುಮಾಂಕಿತ ಭಾಲೆ ಅಗೊ ಆ ಉಷಾ ಬಾಲೆ
ಸೂರ್ಯಮುಕುಟವ ಧರಿಸಿ ಬರಲಿಹಳು ಮೂಡಲಲಿ.
ಪ್ರೀತಿ ಚಿಂತಾಮಣಿಯ ಲಿಂಗವನು ಪೂಜಿಸುತ
ಕಲ್ಪತರು ಮೂಲದಲಿ ಮಂತ್ರಹೇಳಿ—
ಸತ್ಯವಾನನ ಸಂತತಿಯನೆ ಉಳಿಸುವೆನೆಂದು
ಸಾವಿತ್ರಿ ನಿಂತಿಹಳು ಪಂಥ ತಾಳಿ.
  ದುರ್ಭಾಗ್ಯ ಕವಚದಲಿ ಸೌಭಾಗ್ಯ ಬೀಜವಿದೆ
  ಅಜ್ಞಾನದಲ್ಲಿರುವ ಜ್ಞಾನದಂತೆ—
  ತ್ರಿಪುರದಹನದ ಭಸ್ಮ ಹಳೆ ಹಣೆಯ ಬರಹವನು ತೊರೆಯುತಲಿದೆ,
  ಶ್ರೀಮದ್ವಿಭೂತಿಗಳ ಚಾರಿತ್ರ್ಯವನು ಬರೆಯುತಲಿದೆ.
  ಸತಿವೃಂದೆ ಸುಟ್ಟು ಸುಣ್ಣಾದ ಮಣ್ಣಾದ ಮಸಣದಲಿ
  ತುಳಸಿಯಾ ಊದಿ ಬಣ್ಣದ ಕಣ್ಣು,
    ಭಕ್ತಿಮಂಜರಿಯಾಗಿ, ಪ್ರಸನ್ನತೆಯ ಸುಮನಾಂಜಲಿಯ
    ಹೃದಯ ಶಾಲಿಗ್ರಾಮದಲಿ ಅರ್ಪಿಸಲಿದೆ.
ಅನಿರುದ್ಧ ಹೃದಯದಲಿ ಸ್ವಪ್ನಸುಂದರಿಯಾಗಿ
ನಿದ್ರಿಸುವ ಉಷೆಯ ಭಾಗ್ಯೋದಯದ
ಪ್ರೇಮಗರ್ಭಿತ ಸ್ವರ್ಣರೇಖೆಯಂತೆ ಹೊನ್ನಿಂಚಾಗಿ,
ರಕ್ತಾಕ್ಷಿ, ರಕ್ತಾಕ್ಷಿ ಭ್ರಾಂತ ಬಿನ್ನಣದಕ್ಷಿ
ಹಾರಿಸಲಿ ಬಾರಿಸಲಿ ಮಾತಿನ ಪಟಾಕ್ಷಿ
ಇರುಳು-ಕುತ್ತಕೆ ಅತ್ತ ಹೊತ್ತುರುಳಿಸಿತು ಕತ್ತು
ಬಂಜೆ ಸಂಜೆಯ ಸುತ್ತುಮುತ್ತು ಗುಲಬಾಕ್ಷಿ.
ಕರಿಗೊರಳ ಸುತ್ತ ಹಾವಿನ ಹುತ್ತ, ಕೆಳಗಿತ್ತ
ಜೋತಾಡುತಿದೆ ತಾನೆ ಒಂಟಿ ರುದ್ರಾಕ್ಷಿ
ಬೆಳ್ಳಿ ಬೆಳಗಲಿ, ಕಾಕ ನಿಶೆಯಲ್ಲಿ ದಿಶೆಯಲ್ಲಿ
ಧ್ರುವನ ಅನಂತ್ಯಕ್ಕೆ ಕೂಟಸಾಕ್ಷಿ

ನಮನ

ಆ ರಕ್ಷಿ ಈ ರಕ್ಷಿ ದಿವ್ಯಮಾತೆಯ ರಕ್ಷಿ
ಕಾಯುವಳು ಹಿಮನಗರ ಸೌಭಾಗ್ಯ ಯಕ್ಷಿ.

‘ O, Sun–word, thou shalt raise
the earth Soul to light
And bring down god unto lives of men

Earth shall be my work–chamber
and my house
My garden of life to plant a seed–divine ’

—Savitri xi, book I

## ಶ್ರೀಸೂಕ್ತೋಕ್ತಿ

‘ ವಿಷ್ಣುಪತ್ನೀಂ ಕ್ಷಮಾಂ ದೇವೀಂ
ಮಾಧವೀಂ ಮಾಧವಪ್ರಿಯಾಮ್
ಲಕ್ಷ್ಮೀಂ ಪ್ರಿಯಸಖೀಂ ಭೂಮಿಂ
ನಮಾಮ್ಯಚ್ಯುತವಲ್ಲಭಾಮ್ ’.

# ೧. ಕೋಗಿಲೆಗೆ

ಕೋಗಿಲೆ ! ಕೋಗಿಲೆ ! ಎಂದು ಬಂದೆ ನೀಂ ? ಹೇಳಿ ಹೇಳಿ ಗೆಳತಿ !
ನಿನ್ನ ನೋಡಿ ಸುಖವೆಷ್ಟು ಹೇಳಲೌ !— ಹೇಳಲಾರೆ ಅಳತಿ

ಎಲ್ಲಿ ನೀನು ಹೋಗಿದ್ದೆ ಇಷ್ಟು ದಿನ ? ಹೇಳವ್ವಾ ಹೇಳೇ
ಗಂಡನ ಮನೆಗೋ ? ಮಾವನ ಮನೆಗೋ ? ಹೇಳಲ್ಲೇ ಹೇಳೇ

ಹೇಳುವದಿಲ್ಲೇ ? ಹೇಳದೆ ಇದ್ದರೆ ನನ್ನ ಕೊರಳ ಆಣೆ !
ನಿನ್ನಂತಹ ಮಿದು ಮಾಟಗಾರ್ತಿಯನು ಮೂಜಗದೊಳು ಕಾಣೆ

ಏನು ದಿವಾಖವು ! ಏನು ಡೌಲು ಇದು ! ಜಂಭವಿನ್ನು ಸಾಕು ;
ಒಗೆದಕ್ಷತೆಯನು, ಆರತಿ ಬೆಳಗುವೆ— ಹೇಳು ಏನು ಬೇಕು ?

ಎಷ್ಟೇ ಅಷ್ಟೇ ಪಾಲಾ ಬಿಟ್ಟ್ಯಾ ? ಒಡನುಡಿಯೇ ಸಾಕು
ಧೂಪಹಾಕಿ ನಾ ಮಾಡಲೇನು— ಔ— ನಮಸ್ಕಾರ ನಾಕು

(' ಕೂಹೂ ಕೂಹೂ ' ನುಡಿದಳು ಕೋಗಿಲೆ) " ಇದರ ಅರ್ಥವೇನು? "
ಕೂಹೂ ಅಂದರೆ ಏನು ತಿಳಿಯಲೌ, ಬೇಕೊ ಬ್ಯಾಡೊ ನಾನು

ಹೋದ ವರುಷ್ಕುಸಹ, ಇದೇ ಶಬ್ದವನು ನುಡಿಯುತಿದ್ದಿ ನೀನು
ಈ ವರುಷವು ಸಹ, ಇದೇ ಶಬ್ದವೇ ? ಬಿಡೇ ಒಲ್ಲೆ ನಾನು !

ಮನೆಗೆ ಬಂದ ಮೇಲ್ ಮೌನವೇತಕೇ ? ಮಾತಾಡೇ ಹುಚ್ಚೀ !
ಗೆಳತಿಯ ಮುಂದೆ ಹೇಳು ಎಲ್ಲವೂ, ಇಡಬ್ಯಾಡೇ ಮುಚ್ಚೀ

ಸುಖದ ದುಃಖಗಳ ಸಂಗತಿಯನ್ನೂ ಎಲ್ಲಿ ಹೇಳಬೇಕು ?
ಗೆಳತಿಯಲ್ಲದೇ ಯಾರು ಕೇಳುವರು ? ಸಾಕು ಬಿಡೇ ಸಾಕು

(ಕೂಹೂ ಕೂಹೂ ಕೂಹೂ ಕೂಹೂ ' ಎಂದು ನುಡಿದಳಾಗ)
ಸಾಕು ಚ್ಯಾಷ್ಟಿಯಿದು. ಎಷ್ಟು ಹೇಳಲೌ ? ಮಾತಾಡೇ ಬ್ಯಾಗ

## ನಮುನ

ಹೋದವರುಷ ಮಳೆಗಾಲದೊಳಗೆ ನಾ ಪಾಳಿಗೆ ಮೇಲ್ ನಿಂತು
ನೋಡುವಷ್ಟರೊಳು ಸುತ್ತುಮುತ್ತಲೂ ಮಳೆಯು ಕವಿದು ಬಂತು

ಮಿಂಚು ಮಿಂಚಿತೂ, ಗುಡುಗುಡು ಅಂದಿತು, ಸುರಿಮಳೆಯೂ ಬಿತ್ತೇ
ನೀರೇ ನೀರಾಯಿತೇ ಸುತ್ತಲೂ ಎತ್ತನೋಡಿದತ್ತೇ !

ಮಳೆ ತೀರುತ್ತಲೆ ಹೊರಗೆ ಬಂದು ನಾ ಗಿಡದ ಕಡೆಗೆ ನೋಡಿ,
ಎಲ್ಲ್ಯೂ ನೀನಿಲ್ಲದ್ದು ಕಂಡೆನೇ ! ಅಯ್ಯಯ್ಯೋ ! ಖೋಡಿ !

ಕಾಲಪ್ಪಳಿಸಿವೆ; ಎದೆ ಎದೆ ಬಡಿದೆನು, ಬಿಕ್ಕಿ ಬಿಕ್ಕಿ ಅತ್ತೆ !
ಎಲ್ಲಿ ಹೋದಿ ಅರಗಿಳಿಯೇ ! ಅಂದೆನು, ಮಾಣಿಕವೇ ! ಮುತ್ತೇ !

ಧಕ್ಕ ಧಕ್ಕನೆದೆ ಹಾರಹತ್ತಿದೊಡೆ ಅನಿಸಿತು ನೀ ಸತ್ತಿ !
ಗಂಡನ ಮನೆಗೇ ಹೋದೆಯೆಂದು ನೀ ಹೇಳಿದಳೇ ಅತ್ತಿ.

ಸುಮ್ಮನಾದೆ ನಾ, ಕಣ್ಣು ಒರಸಿದೆನು; ಸಮಾಧಾನವಾಗ್ಗೆ
ಅನಿಸಿದರೂ ಸಹ ಖೇದವೆನಿಸಿತೇ; ಹೇಳದೆ ಹೋಧೇಗೆ ?

ಅತ್ತೆಯವರ ಮನೆಘೋಗುವೆನೆಂದೂ ಹೇಳಬಾರದಿತ್ತೇ ?
ಇಷ್ಟೂ ಹೇಳಲು ಗೆಳತಿಯ ಮುಂದೂ ನಾಚಿಕೆ ಒಂದಿತ್ತೆ ?

( ‘ ಕೂಹೂ ಕೂಹೂ ಕೂಹೂ ಕೂಹೂ ’ ಕೂಗಿತ[illegible]ದು ತಿರುಗಿ )
( ‘ ಕೂಹೂ-ಹೂಂ ಹೂಂ ’ ಪ್ರತಿಧ್ವನಿಯಾಯಿತು [illegible]ನೇ ತಿರುಗಿಮುರುಗಿ)

‘ ಹೂಂ ಹೂಂ ಹೂಂ ಹೂಂ ’ ಏನು ಅನ್ನುವದು ಇದು ಅಲ್ಲೇ ಛಂದ !
ಹುಡುಗಾಟಿಕೆಯಿದು ಸಾಕಾಗಿಲ್ಲೇ ? ನೀನಲ್ಲಾ ಕಂದ !

ಮದುವೆಯಾಗಿ ಹೋಗಿದ್ದರು ಸಹ ನೀ ಹೇಳಲಿಲ್ಲ ನನಗೆ
‘ ಗಂಡನ ಹೆಸರನು ಹೇಳು ’ ಎಂದು ನಾನೆಂದು ಅಂದೆ ನಿನಗೆ ?

## ನಮನ

ತೊಟ್ಟಿಲದೊಳಗೇ ಮದುವೆಯಾಯಿತೋ ಇನ್ನಾದರು ಹೇಳೇ !
ಹೇಳದಿದ್ದರೂ ಅಷ್ಟೇ ಹೋಯಿತು, ನಾನು ಬಿಟ್ಟೆ ಕೇಳೇ !

ವಸಂತರಾಜನ ರಾಣಿಯಾದೆ ನೀ—ಎಂದಳೆನಗೆ ಅತ್ತಿ
ಅಹಾ ! ಕುಲು ಕುಲೂ—ಕುಹೂ ಕುಹೂ—ನಗೆ ! ಸಾಕೆ ಸೊಬಗುಗಾರ್ತಿ

ಮಧುಮಾಧವನೇ ಗಂಡನಲ್ಲವೇ ? ಬಾಯಿಬಿಚ್ಚೆ, ರಾಣಿ !
ಗಂಡನ ಹೆಸರನು ಹೇಳದೆ ಇದ್ದರೆ ನನ್ನ ಜೀವದಾಣೆ !

ರಾಣಿಯಾದರಾ ರಾಜನಿಗಾದಿ—ನನಗೆ ಗೆಳತಿಯಲ್ಲೇ ?
ನಿನ್ನ ಮೇಲೆ ನಾ ಪ್ರೀತಿ ಮಾಡುವದು 'ಗೆಳತಿಯು' ಎಂದಲ್ಲೇ ?

ದನವ ಕಾಯ್ವ ಹುಡುಗರೂ ಕೂಡ ಕೇಳ್ ಟಕಮಕ ನೋಡುವರು
ಹಾಡು ಕೇಳುತಲೆ ನೀನಿದ್ದಲ್ಲೇ, ಬೇಗನೆ ಓಡುವರು

ಕೈಯೊಳಗಿನ ಕೊಳಲನ್ನು ಬಿಸುಟಿದನು ಕುರುಬನು ಧ್ವನಿ ಕೇಳಿ
ಎಲ್ಲರ ಮನಸಿಗೆ ನೀನೆ ಬಂದಿಯಾ ಇದೀ ಭೂಮಿಯಲ್ಲಿ ?
ಕಪ್ಪು ಶರೀರಕೆ ಮರುಳನೊಬ್ಬನಾ, ಹಾಡಿಗೊಬ್ಬ ಹುಚ್ಚು !
ಹೊರಗಿನವಿವು ನಾ ನೋಡಿ ಬೆರಗೆನೇ ; ಅದು ಮಾತದು ಮೆಚ್ಚು !

ನಿನ್ನ ನೋಡುತಲೆ ಸುಖವೆನಿಸುವದೇ, ಗೊತ್ತಿಲ್ಲವು ಯಾಕೆ ?
ಗೊತ್ತಿದ್ದಾದರು ಏನು ಮಾಡುವದು—ಪ್ರೀತಿ ಅದೇ ಸಾಕೆ !

ಒಂದು ಜೀವವನು ಒಡೆದು ಎರಡರೊಳು ಹಾಕಿದಂತೆ ಆಗಿ
ತಳಮಳಿಸುವೆನೇ ನಿನ್ನ ನೋಡಿ ನಾ ಜೀವದ ಸ . .ವಾಗಿ !

ಎದೆಗೆ ಎದೆಯನೂ ಹಚ್ಚಿ ಕುಳಿತರೂ ನಾಕುಬಟ್ಟು ದೂರ
ಒಂದೇ ಆಗಲಿ ; ಎರಡು ಬೇಡಿವ್ರಾ-ಒಂದೇ ಇದೀ ಪೂರಾ

## ನವುಂನ

ನಿಮಿಷಮಾತ್ರವೇ ಎಂದೆಂದಾದರು ಅನಿಸುವವೇ ನನಗೆ !
ವಸಂತಮಯ ಜಗ— ಏನೂ ಇಲ್ಲವು ಭೇದ ನನಗೆ ನಿನಗೆ !

ಮಾವಿನ ಮರಗಳೆ ಕಾಣಹತ್ತವವು ನಿನ್ನಂಥಾ ಕೂಗೆ
ಹೂವೇ ಹೂಗಳು— ಅದರ ಹೊರ್ತು ಜಗ ಎಲ್ಲ ಶೂನ್ಯ ಆಗ್ಗೆ

ಹಣ್ಣು ಹಣ್ಣು ತಗಲಾಡಿ ರಸದ ಮಳೆ ಸುರಿವ ಸಾಡಿನಲ್ಲಿ
ಮುಳುಗಿ ಹೋದೆ ನಾ— ಸುತ್ತುಮುತ್ತಿಹುದು ಮಾಧವೀಯ ಬಳ್ಳಿ

‘ ಕೂಹೂ ಕೂಹೂ ಕೂಹೂ ಕೂಹೂ ಕುಹೂ ಕುಹೂ ’ ಒದರಿ
( ಎಚ್ಚರ ಮಾಡಿತು ; ಉಸುರು ಬಿಟ್ಟಳ್ಯೆ ಎಚ್ಚತ್ತಳು ಹೆದರಿ !

ಕೋಗಿಲೆ ಕಂಡಿತು ಗಿಡದ ಮೇಲೆ, ಹಾ ! ಅವಳು ಗಿಡದ ತೆಳಗೆ
ಜೀವವಾಯಿತ್ಯೆ ಅರ್ಧ ಅರ್ಧವೇ, ಅವರಿಬ್ಬರ ಒಳಗೆ ! )

ಬೆಳೆಯು ಬೆಳೆದು ಕಳೆ ಏರಿತು ಭೂಮಿಗೆ ; ಬರಲಿಲ್ಲೇ ನೀನು !
ಆಳು ಜೋಳದೊಳು ಓಡುವಾಗ್ಗೆ, ಹಾ ! ನೆನಸಿದೆನೇ ನಾನು !

ಹಣ್ಣು ಎಲೆಗಳೂ ಹಾರಿಹೋದವೂ ; ಎಲ್ಲ ಮಣ್ಣುಪಾಲು !
ಮಾಗಿಯು ಬಂದಿತು, ಮನೆಯ ಸುತ್ತಲೂ ಬರೇ ಗಿಡದ ಸಾಲು

ಮಳೆ-ಬೆಳೆಗಾಲಗಳಾದವು ಮಾಗಿಯು ಆಗಿಹೋಯಿತೀಗ !
ಬಾರೇ ಬಾರೇ ಜೀವದ ಗೆಳತೀ !— ಬಾ ಬಾರೇ ಬ್ಯಾಗ !

‘ ಮುಪ್ಪು ಹೋಯಿತೌ— ಹರೇ ಹರವಲೇ ಹೀಗೆ ನಾನು ಅನಲು
ಮಾವು ಬೇವಿನೊಳು ಸಹಜ ಕಂಡೆನೇ ಈ ಸುಗ್ಗಿಯ ಕಾಲು !

ಕೋರೀಹುಳದಿಂ ಪಾತರಗಿತ್ತಿಯು ಕುಣಿಯುತ ಬರುವಂತೆ
ಮಾಗಿಯ ಬೆನ್ನನು ಬಿರಿಯುತ ಬಂದಿತು, ಸುಗ್ಗಿಯು ಅದರಂತೆ !

## ನೆಮನ

ಕಂಡೆನು ನಿನ್ನನು, ಎಲೇ ಕೋಗಿಲೇ! ಮಾವಿನ ಮರದೊಳಗೆ!
' ಕೂಹೂ ' ಶಬ್ದವ ಕೇಳಿದ ಕೂಡಲೆ ಓಡಿಬಂದೆ ತೆಳಗೆ!

ಇಷ್ಟು ಹೊತ್ತು ನಾ ಎಷ್ಟಾಡಿದರೂ ಉತ್ತರವೇ ಇಲ್ಲ!
( ' ಕೂಹೂ ಕೂಹೂ ' ಅಂದಳು ಗೆಳತಿಯು—ಅರ್ಥ ತಿಳಿಯಲಿಲ್ಲ )

ಅತ್ತರು ಕೂಹೂ, ನಕ್ಕರು ಕೂಹೂ, ಕೂಹೂ ಎಲ್ಲಕ್ಕೂ
ಒಂದೇ ಸ್ವರವೇ—ಒಂದೇ ಮಾತೇ—ಏನು ಮಾಡಬೇಕು ?

( ಶಬ್ದಬ್ರಹ್ಮವು ' ಕೂಹೂ ' ಎಂಬದು ತಿಳಿದಳಾಗ್ಗೆ ಬಾಲೆ
ಕೂಹೂದೊಳಗೇ ಎಲ್ಲ ಅರ್ಥವೂ—ನುಡಿದಳು ಆವ್ಯಾಲೆ )

ವಸಂತರಾಜನ ರಾಣಿ ನೀನು, ನಾ ಒಕ್ಕಲಿಗನ ಹುಡುಗಿ!
ಮಾವಿನ ಹಂದರ ನಿನಗೆ; ನನಗೆಲೇ ಹರಕು ಉಡಿಗಿ ತೊಡಿಗಿ!

ಪ್ರೀತಿ ತೀರ್ಥವಿದು ಸೂಸುತುಂಬಿತಾ—ಕಾಣದಾಯ್ತು ತಳವು
ಅದನ್ನಾದರೂ ಧುಮುಕಿ ನೋಡೆ ನೀ ಕಂಡರದರ ಆಳವು

# ೬. 'ಇಳೆ' ಎಂದರೆ ಬರಿ ಮಣ್ಣಲ್ಲ

ಇಳೆಯೆಂದರೆ ಬರಿ ಮಣ್ಣಲ್ಲ
ನಮಗೋ ನೋಡುವ ಕಣ್ಣಿಲ್ಲ ॥ಪ॥

ಏಸು ತಿಂದರೂ ತೀರದಿದೆ
ಏನು ತುಂಬಿಯೂ ಮೀರದಿದೆ
ಅವ್ಯಕ್ತವೆಂಬುದೂ ಅನಂತವೆಂಬುದು ಕಾಲಲ್ಲೇ ಇಲ್ಲೇ
ವೈಯೊಳು ಮಲಗಿದ ಆ ಆಕಿದ್ದರೆ ಬಾನೇ ಮನೆಯಲ್ಲೇ
ಈ ನೆಲಕೆಲ್ಲಾ ನೀರೇ ಮೇರೆ
ನೀರುಗಾಳಿಗಳ ಹಾದಿಯೆ ಬೇರೆ.
ಅಣ್ಣ ತಮ್ಮಂದಿರು ತಮ್ಮ ತಮ್ಮೊಳಗೆ ಕಾದಾಡಲು ಬೇಕೆ ?
ನಲುಮೆಯ ನೀರನು ಕಣ್ಣೀರೆನ್ನುತ ಚೆಲ್ಲಾಡುವಿರೇಕೆ ?
ಮಣ್ಣಲಿ ನೀರಲಿ ಸೂರ್ಯನ ಕಿರಣ
ಚಿತ್ರಿತವಾಗಲಿ ಅಪಾರವರಣ
ಬಾನುಲಿಯಲಿ ಮಾತಾಡುವ ಬನ್ನಿ ಗಾಳಿದೇರನೇರಿ
ಈ ರಸ ಮೀರಿ ಆ ರಸವೇರಿ ರಸರಸಿಕರು ಸೇರಿ.
ಅಕಾಂಡ ತಾಂಡವವೇತಕ್ಕೆ
ಲಾಸ್ಯವೆ ಸಾಕು ಈತಕ್ಕೆ
ನಂದಾದೀಪದ ನಡೆಮಾಡಗಳೇ ಸಂಚರಿಸುವ ಹಾಗೆ
ಜೀವ ಜೀವಗಳ ಕಾರ್ತಿಕೋತ್ಸವವು ಮೊದಲಾಗಲಿ ಮೇಗೆ.
ಋತುಗಳು ನಡೆಸಲಿ ರಿಂಗಣಗುಣಿತ
ಜೀವ ನುಡಿಸುತಿರೆ ವೀಣಾಕ್ವಣಿತ
ಮಾಲೆಯು ಕೊರಳಿಗೆ ಜೋತಿರುವಂತೆ ಹೃದಯಕೆ ಬಂದಾತು
ಸುಗ್ಗಿಯು ನೆಲವನೆ ಸುತ್ತುತ್ತಿರಲಿ ಮಧುಲೀಲೆಗೆ ಸೋತು.

# ೪. ಒಂದೆ ತಾಯಿಯ ಮಕ್ಕಳು

ಒಂದೆ ತಾಯಿಯ ಮಕ್ಕಳು
ಒಂದೆ ತವರ್ಮನೆ ಒಕ್ಕಲು.

ಬಣ್ಣ ಬಣ್ಣದ ಜನರು ನಾವಿಂದೊಂದುಗೂಡಲು ಬಂದೆವು
ಮಣ್ಣ ಭೇದವನೆಣಿಸದೇ ಒಂದೆದೆಯ ಬಲವನು ತಂದೆವು
ತಾಯಿನೆಲವೇ ಅನ್ನವೆಂದೇ ನಿನ್ನ ಮೈಯ್ಯನ್ನುಂಡೆವು
ತಾಯಿ ಮೊಲೆವಾಲೆಂತು ತೊರೆವುದೊ ಅಂತು ಸೆಲೆಗಳ ಕಂಡೆವು

ಅದಕೆ ಜೀವನವೆಂದೆವು
ಅದುವು ಇರದಿರೆ ಬೆಂದೆವು.

ಪ್ರಾಣದೀಪವು ಬೆಳಗಲೆಂದೇ ಪ್ರಾಣವಾಯುವ ಕುಡಿದೆವು
ತ್ರಾಣ ಬೇಡುವ ಬಳ್ಳಿಯಂದದಿ ಬೆಳಕಿನತ್ತಲೆ ನಡೆದೆವು.

ಮರಣ ಜನನದ ನೋಟವು
ನೆರಳು ಬಿಸಿಲುಗಳಾಟವು.

ಬದುಕಿಗೆಂದೇ ಬದುಕಲೆಂದೇ ಗುಡ್ಡ ಹೊಳೆಗಳದಾಂಟುತ
ಉದಧಿ ಮಂಥನದಿಂದ ಪಾಲಿಗೆ ಬಂದ ವಿಷವನ್ನೀಂಟುತ

ಧ್ರುವ ಧ್ರುವಕು ಸುಳಿಸುಳಿದೆವು
ಬುವಿಯ ಸುತ್ತುಗಳಳಿದೆವು.

ಮುಖದ ಮೂಗಿನ ಕಣ್ಣಕರುಳಿನ ರೂಪರೂಪದಿ ಬೆಳೆದೆವು
ಸುಖದ ನೆಲೆಯಲಿ ಬಿಸಿಲ ಬೆಳಕಿಗೆ ಬಣ್ಣ ಬಣ್ಣವ ತಳೆದೆವು

ತಂಡ ತಂಡದಿ ಒಡೆದೆವು
ಗಂಡು ಗರುವಿಕೆ ಪಡೆದೆವು.
ಘಟ್ಟ ಮಲೆಗಳ ಥಟ್ಟಿಸಿ
ಕೋಟೆಕೊತ್ತಳ ಕಟ್ಟಿಸಿ

ಪುರದ ನಗರದ ಪತ್ತನಂಗಳ ರೇವು ದ್ರೋಣಾಮುಖಗಳ
ಪರಿಕರದ ಪರಿವಾರದಲಿ ಬಲು ಬೆಳೆಸಿರುವ ಮಂಡಲಗಳ

ರಾಜ್ಯ ಸ್ವಾರಾಜ್ಯಂಗಳು !
ಪ್ರಾಜ್ಯ ಸಾವ್ರಾಜ್ಯಂಗಳು !

ಹೆಣ್ಣುಗರುಳಿನ ಮೋಹ ಮಮತೆಗೆ ಬೇರಿಯಿದ್ದರು ಬೆರಿತೆವು
ಸಣ್ಣನೆಯ ದನಿ ಸಾರಿ ಹೇಳಲು ಜನವು ಒಂದೆಂದರಿತೆವು

## ೫. ಭೂಮಿತಾಯಿ




ಮೈ ತುಂಬ ಬಾಯಿ ನೀನು
ತುಟಿಮುದ್ದು ನನ್ನ ಪಾಲು ;
ಎದೆಯಾಳ ಮೊಲೆಯು ನೀನು
ಮೈ ತುಂಬ ನನಗೆ ಹಾಲು

ಕಂಡಲ್ಲಿ ನಿನ್ನ ಮುಖವು
ಕಣ್ತುಂಬ ನನಗೆ ಸುಖವು
ನೆಲದುದ್ದ ತೊಡೆಯು ನಿನಗೆ
ಮನವಾರೆ ನಿದ್ದೆ ನನಗೆ

ನೀ ತಿರುಗುತಿದ್ದರೇನು
ನೀನಿಲ್ಲದೆಡೆಯು ಇಲ್ಲ
ನಾ ತಪ್ಪಿ ನಡೆದರೇನು
ನೆಲೆ ಬೇರೆ ಕಾಲಿಗಿಲ್ಲ

ಬಾನಗಲ ತೊಟ್ಟಿಲಲ್ಲಿ
ನೀ ತೂಗುತಿರಲು ನನ್ನ
ಕಟ್ಟಿರಲು ಚಿಕ್ಕೆಚಟ್ಟು
ನಾ ಮರೆವುದೆಂತು ನಿನ್ನ ?

ಕಣ್ಮುಚ್ಚಿ ತೆರೆಯುತಿರುವೆ
ಈ ಆಟ ಮುಗಿವುದೆಂದು ?
ನಿದ್ದೆಯನು ಮೀರಿ ನಿಂದು
ಮಕ್ಕಳನು ಎಂದು ಕರೆವೆ ?

## ನಮನ

ಓ ತಾಯಿ ನೆಲವೆ ನಿಲವೆ
ತಮ ಬೆಳಕು ಹೊಮ್ಮಲಿನ್ನು
ನಮ ಮ್ಮೈಯು ಬೆಳಕುದುಂಬಿ
ನೀನಾಗ ನಲಿವೆ ಗೆಲುವೆ.

ಯಾ ಬಣ್ಣವಿದ್ದರೇನು
ಯಾಕಣ್ಣ ಅದರ ಮಾತು ?
ಬೆಳಕಾಗಲೆಮ್ಮ ಬದುಕು
ಒಂದೀತು ಜೀವ ಹೂತು.

ಯಾ ಪಾಡು ತೋಡಿಯೋನು ?
ಈ ಹಾಡು ಬೇಕು ನಮಗೆ
ಅರಿವಾಗಿ ಹೀಗೆ ನಗಲು
ಬಾಳುದ್ದ ಒಂದೆ ಹಗಲು.

# ೬. ಹಸಿರಲ್ಲಿವೆ ಕೆಸರಲ್ಲಿವೆ

ಹಸಿರಲ್ಲಿವೆ ಕೆಸರಲ್ಲಿವೆ ಹೆಸರಿಲ್ಲದ ಹೂವು
ಉಸಿರಾಡಿಸಿ ಹುಸಿಮುಸಿ ನಗೆ ಸೂಸುತ್ತಿವೆ ತಾವು

ಹಾ ಹಾ ಈ ಹೂ ಹೂ ಇವೆ ಸರಸಿಯ ಸರಿಸದಲಿ
ತೋರದೆ ಕುಣಿವಪ್ಸರೆಯರ ಕಾಣದ ಪರಿಸೆಯಲಿ

ಗಾಳಿಯ ಅಲೆ ತಲೆದೂಗಿದೆ ಮಿತವಾಗಿವೆ ಸರ್ವ
ಹಾಡುವವೊಲು ಕೇಳಿಸುತಿದೆ ಯಾವನೊ ಗಂಧರ್ವ

ಪ್ರೇಕ್ಷಕರೆನೆ ಕುಳಿತಿರುವರೊ ಯಕ್ಷನ ಬಳಿ ಯಕ್ಷಿ
ಕಲ್ಪಿತರಂಗವ ತಲ್ಪಿಸೆ ಅರಳಿವೆ ಚೈತ್ಯಾಕ್ಷಿ

ಚರಿಸುತ್ತಿದೆ ಗೋಚರಿಸದ ವರದೇಹಿಕ ಭಾವ
ಸ್ಥೂಲಕ್ಕೆಳೆಯಲೆ ಸೂಕ್ಷ್ಮದ ನಸುಕಿನ ಮುಂಜಾವ ?

ಎಚ್ಚರ ಎಚ್ಚರ ಎಚ್ಚರ ಉಚ್ಚರಿಸಿತು ಸ್ವರವು
ಕಿವಿಗಂಟೆಯ ಹುದುಲಯದಲಿ ಮೌನದ ಮರ್ಮರವು

ನರುಗಂಪಿನ ಕಂಪನದಲಿ ರಾಗದ ಚಾತುರ್ಯ
ಚಾರುತ್ವದ ಧುರವಹಿಸಿರೆ ಮದಿಸಿದ ಮಾಧುರ್ಯ

ತೂರ್ಯದ ರವ ತುತ್ತುತ್ತೂ ತುತ್ತೂರಿಯನೂದಿ
ಸ್ವಚ್ಛಂದಕೆ ಹೃತ್ಸ್ಪಂದಕೆ ತೆರೆಯಿತು ಹೋ ! ಹಾದಿ

ಚಿತ್ರದ ವರ್ಣವು ಹಾರಿರೆ ಉಳಿದಿರುವೊಲು ರೇಖೆ
ಏನೋ ಸೂಚಿಸುವಂತಿದೆ ಅದ ಬಣ್ಣಿಸಲೇಕೆ ?

ಕ್ಷಣ ಭಂಗುರ ಸೌಂದರ್ಯವ ರಕ್ಷಣದಲೆ ಉಳಿಸಿ
ಶಿಕ್ಷಣರಂಗವ ಹೂಡುವ ಈ ಕ್ಷಣದಲೆ ಮೊಳಿಸಿ

ಓ ರಸಿಕನೆ ರಚಿಸುವ ಬಾ ನಾನೀನೊಡಗೂಡಿ
ಸಂಭಾವಿತ ಕವನವನೇ ಬರಲದು ಒಳಮೂಡಿ.

## ೭. ಬಾಳೆ

ಕದಲದೆ ನಿಂತಿದೆ ಬಾಳೆಯೊಳೀ
ಬಾಳಿನ ಕದಳಿ
ತೊದಲಿಲ್ಲದೆ ಬಯಲೊಳಗೊಂಡಿದೆ
ಓ ಯಾವ ತಳಿ ?

ಸೆರಿ ಹಿಡಿದರು ತೊಡೆ ಕಡಿದರು
ಯಾ ರಂಭೆಯನಿಲ್ಲಿ ?
ಇದೊ ಹುಗಿದರೊ ಏನ್ ಬಗೆದರೊ
ಚೆಲುಗೊಂಬೆಯನಿಲ್ಲಿ.

ಒಕ್ಕಾಲಲಿ ಒಕ್ಕಲಿಸಿದೆ
ದಿಕ್ತಪ್ಪಿದ ಜೀವ !
ಕರಣಂಗಳ ಚರಣಂಗಳ
ಆಡಿಸುತಿದೆ ನೋವ.

ಅರ್ಭಕನನು ಗರ್ಭಿಸಲಿದೆ
ಸುಳಿನಾಭಿಯ ಒಳಗೆ
ಪಡದೆಯ ಹಿಡಿದಿವೆ ಎಲೆಗಳು
ಸುತ್ತಲು ಚಂಬಳಿಗೆ

ಓ ಕೋಮಲೆ ಓ ಶ್ಯಾಮಲೆ
ಯಾವುದು ಈ ಭವವು
ಕಂದನ ಹೊರ ತಂದೆನು ಎನು-
ತಿರುವೀ ಅನುಭವವು

ಯಾ ಬುದ್ಧನು ಒಳಗಿದ್ದನೊ
ಹೊರಬಿದ್ದನೊ ಈಗ
ಸಿದ್ಧಾರ್ಥಗೆ ಸಿದ್ಧಿಸುತಿದೆ
ಸರ್ವಸ್ವದ ತ್ಯಾಗ

## ನಮನ

ಎದೆ ಹೂ ಇಗೊ ತಲೆ ಬಾಗಿಸಿ
ಮಣಿಯುತ್ತಿದೆ ಇಳೆಗೆ
ಫಲ, ನಿಷ್ಫಲ ! ನೀಳಿಗೆಂಪೋ-
ಮೂಲದಲಿದೆ ಬೆಳಿಗೆ

ಅರ್ಪಣಕಿದು ದರ್ಪಣವೆನೆ
ಮಿರುಗುತ್ತಿದೆ ಮೈಯು
ದರ್ಪಿಸದಲಿ ತರ್ಪಿಸುವೊಲು
ಎತಿ ಎತಿ ಕೈ ಕೈಯು

ಎಲೆಗೇ ಎಲೆಗೇ ರಂಭೇ
ಒಲಿಯುವೆ ಎಲೆ ಎಲೆಗೆ
ಶರಣನ ಮರಣವ ಕೊಳುತಿಹೆ
ಅನುರಾಗದ ಬೆಲೆಗೆ

ನೀ ತಣ್ಣಗೆ ನೀ ನುಣ್ಣಗೆ
ನೀ ಕಣ್ಣಿಗೆ ಚೆಂದ
ಬಾಳಿನ ಸ್ಮಾರಕದಂತಿದೆ
ಈ ಸಾವಿನ ಅಂದ

ಬಾ ಗೆಳೆಯಾ ನೋಡಿದೆಯಾ
ಕ್ಷಣವಾದರು ನಿಂತು
ಬಾಳಿನ ಕೊನೆ ಬಂದಂತಿಗೊ
ಬಾಳಿಗೆ ಗೊನೆ ಬಂತು !

## ೮. ‘ ತತಃ ಕಿಂ ? ’

‘ ಅವಿದ್ಯೆಯೆಂಬುದು ವಿದ್ಯೆಯ ತಾಯಿ ’
ಎಂದರು ಕೆಲವು ಸುವಿದ್ಯರು.

‘ ವಿದ್ಯೆಯೆಂಬುದು ಅವಿದ್ಯೆಯ ಬಾಯಿ ’
ಎಂದವರೂ ಕೆಲರಿದ್ದರು.

‘ ಏನು ಎಂದರೋ ಏನು ತಿಳಿದರೋ ’
ಇಬ್ಬರು ಮಹಾನುಭಾವರು.

ಒಬ್ಬರಿಗೊಬ್ಬರು ಸಾಟಿ ಅಸಾಮಿ
ಹೆಚ್ಚಿನದೇನಿದೆ ? ದೇವರು !

ಸುಮ್ಮನಿರುವರೋ ಗುಮ್ಮನಗುಸುಕರು;
ಬಿಮ್ಮಗೆ ಇರುವರು ಬೆಪ್ಪರು.

ಮಾತನಾಡುವರು ತಪ್ಪುವದುಂಟು;
ಮೂಕಮೌನಿಗಳು ತಪ್ಪರು.

ಭಾಪುರಿ ಬೊಪ್ಪರಿ ಎಂದೆನು ಅವರನು
ವಾದದಿ ಅವರೇ ಗೆದ್ದರು

ಪೂರ್ಣ-ಅಪೂರ್ಣ ಎಂದರಿ ಸೋತರು
ಶೂನ್ಯವಾದವರಿ ಬುದ್ಧರು

ಹೇಳಿ, ಕೇಳಿ, ಸತ್ತವರೇ ಶರಣರು
-ತಿಳಿಸದೆ ಸತ್ತರಿ ವೇದಾಂತಿ

ತಪಿಸಿ, ಜಪಿಸಿ, ಸತ್ತಾ ಸಿದ್ಧಾಂತಿ
ಹೇಳು ಮುಂದೆ ನೀನೇನಂತಿ ?

# ೯. ಅಳ್ಳಳ್ಳಿ ಬಾವಾ

ಅಳ್ಳಳ್ಳಿ ಬಾವಾ। ಬಂದಾ। ಅಳ್ಳಳ್ಳಿ ಬಾವಾ॥

ಯಾರ್ನ ಕೇಳಿದರೂನೂ ಅಂತಾರ, ಅಲ್ಲ ನಮ್ಮಾವಾ।
ಇವನ್ನ ಕೇಳಿದ್ರಂವಾ ಅಂತಾನ ತಾಂ ಎಲ್ಲಾರಾವಾ।
ಇವನ ಗಡ್ಡಾ। ಅಡ್ಡಾತಿಡ್ಡಾ। ಇವನ ಮೀಸೀ। ಹರಕಾ ಪರಕಾ
ಮೂಗಿನ್ಯಾಗ ಏರಿಸಿಕೊಂಡಾನ ಮದುಗುಣಿಕೀ ಹೂವಾ
ಬಗಲಾಽಗ ಮುಚಿಕೊಂಡಾನ ಕೊಡಲಿಯ ಕಾವಾ॥
ಇಂವಾ ಯಾಂವಾ। ಇಂವಾ ಯಾಂವಾ। ಅಂದೀರೀ ನೀವಾ
ಮಾಡಲಿಕ್ಕೆ ಬಂದಾನಂತ ದೈವಽದ ಸೇವಾ।

ಮೂರು ಮಕ್ಕಳ ಮೂಗುತಿಂದು
ಸವಿಯಿಲ್ಲಾ ಅಂದಾ
ನಾಕು ಮಕ್ಕಳ ಕಣ್ಣಕಿತ್ತಿ
ಅಂದಾ ಬಲುಚೆಂದಾ

ಕಂಡಕಂಡವರ ಚೆಂಡಿಕ್ಕಿ ಹರಿದು
ಬಾಗಿದ ಬೆನ್ನಮೂಳಿ ಹಿರಿದು
ನ್ಯಾರಿ ಅಂತ ಗೆರೀ ಕೊರೆದು

ಮುಂದಕಿಟ್ಟರ ಕಾಲನ್ನ। ಮುರಿದೆನಂಬಾವಾ
ಎಲ್ಲಾಽರ ಪ್ರಸಾದಾನಽ। ತಾ ತಿಂಬಾವಾ
ಎಲ್ಲಿ ಇದ್ದಿದ್ದಾನು ಹುಚ್ಚಾ। ಇವನ್ನ ನಂಬಾವಾ
ತಾನಿಂತಽ ಟೊಂಗೀ ತಾನೇ ಕಡಿದಕೊಂಬಾವಾ.

# ೧೦. ಮಧುಮಾಸದ ಕುಣಿತ

ಕುಣಿಕತಡದ ನೋಡ ಗೆಳತಿ। ಕುಣೀತದ ನೋಡು
ಒನಪಿಲೆ ಮಧುಮಾಸ ಇಲ್ಲಿ। ಕುಣೀತದ ನೋಡು
ಹ್ಯಾಂಗ ಕುಣೀತದ ನೋಡು ॥ಪಲ್ಲ॥

ನಮ್ಮನೆಯ ನೆರಿಹೊರೆಯಲ್ಲಿ
ನೆಲದಂಚಿನ ಆ ಕೆರೆಯಲ್ಲಿ
ಕಣ್ಣೆಳಸಿ ಎಳೆದಲ್ಲಲ್ಲಿ ॥ ಕುಣೀತಡದ... ॥ ಹ್ಯಾಂಗ...

ಗೊಲ್ಲರ ಗುಡಿಸಲದ ಮ್ಯಾಲೆ
ಹೊಲೆಯರ ಹೊಲಗೇರಿಸುತ್ತ
ಯಾರಾರೂ ಇರದಲ್ಲಲ್ಲೂ ॥ ಕುಣೀತಡದ... ॥ ಹ್ಯಾಂಗ...

ನೆಲದಡ ಹಿರಿತಡನಕಾಗಿ
ಜನಾ ಜನರ ಕೊಲ್ಲುವಾಗ
ಈ ಬಡತನವೇತಕೆಂದು ॥ ಕುಣೀತಡದ... ॥ ಹ್ಯಾಂಗ...

ಅಡ್ಡ ಮಳೆಯ ಅಬ್ಬರದಲ್ಲಿ*
ಕಸುವಿನ ಬಿರುಗಾಳಿ ಬೀಸಿ
ಮುಸುಕುವ ಕೆಂಧೂಳಿ ತೂರಿ ॥ ಕುಣೀತಡದ... ॥ ಹ್ಯಾಂಗ...

ಕೋಲ್ಮಿಂಚಿದು ಹೊಳೆಹೊಳೆವಾಗ
ಗುಡುಗಾಡುವ ಗುಡುಗಿನಲ್ಲಿ
ಖಡಿಲ್ ಎಂದು ಸಿಡಿಲಿನ ಜತಿಗೆ ॥ಕುಣೀತಡದ...॥ ಹ್ಯಾಂಗ...

ತೊಂಗೆಯ ಹೊಯ್ದಾಟದಲ್ಲಿ
ಗೊಂಚಲು ತಲೆದೂಗುವಾಗ
ಎಲೆಗಳ ಕೋಲಾಟದಲ್ಲಿ ॥ ಕುಣೀತಡದ...॥ ಹ್ಯಾಂಗ...

## ನಮನ

ಹವಳ ಮಲ್ಲಿಗಿ ಸುರಿಸಿ
ಮಾವು ಮಲ್ಲಿಗಿ ಹರಸಿ
ಎಲ್ಲರನೂ ಅಲ್ಲಿಗೆ ಕರೆಸಿ ॥ ಕುಣೀತsದ... ॥ ಹ್ಯಾಂಗ...

ಹೂಗೊಂಚಲ ಸೆರೆಮನೆಯಲ್ಲಿ
ರಸ ಕುಡಿಯುವ ತುಂಬಿಗಳಿಲ್ಲಿ
ಝೇಂಕರಿಸುತ ನಿನದಿಸುವಲ್ಲಿ ॥ ಕುಣೀತsದ... ॥ ಹ್ಯಾಂಗ...

ಹುಲಗಲ ಹೂ ಹುಣಿಸೆಗಳಿಲ್ಲಿ
ಬರದಂತೆ ರಂಗವಲ್ಲಿ
ಹೂ ಎರಚಿದ ರಂಗದಲ್ಲಿ ॥ ಕುಣೀತsದ... ॥ ಹ್ಯಾಂಗ...

ಬಿಸಿಲಿರಲಿ ಹರಯದಲ್ಲಿ
ಒಲಿದವರೊಡನಾಟದಲ್ಲಿ
ಹಗಲೇ ಬೆಳುದಿಂಗಳೆನಿಸಿ ॥ ಕುಣೀತsದ... ॥ ಹ್ಯಾಂಗ...

ಪಂಪನ ಬನವಾಸಿಯಲ್ಲಿ
ಎಂದೋ ವೈಶಾಖದಲ್ಲಿ
ಕುಣಿದರು ಅದು ಈಗೂ ಇಲ್ಲೇ ॥ಕುಣೀತsದ... ॥ ಹ್ಯಾಂಗ...

ನಾ ಹೇಳುವ ಹಾಡಿನಲ್ಲು
ನೀ ಕೇಳುವ ಹೃದಯದಲ್ಲು
ಒಳಹೊರಗೂ ತಾನೆಲ್ಲೆಲ್ಲು ॥ ಕುಣೀತsದ... ॥ ಹ್ಯಾಂಗ...

# ೧೦. ಮಧುಮಾಸದ ಕುಣಿತ

ಕುಣಿತsದ ನೋಡ ಗೆಳತಿ । ಕುಣೀತದ ನೋಡು
ಒನಪಿಲೆ ಮಧುಮಾಸ ಇಲ್ಲಿ । ಕುಣೀತದ ನೋಡು
ಹ್ಯಾಂಗ ಕುಣೀತದ ನೋಡು ॥ಪಲ್ಲ॥

ನಮ್ಮನೆಯ ಸೆರಿಹೊರಿಯಲ್ಲಿ
ನೆಲದಂಚಿನ ಆ ಕೆರಿಯಲ್ಲಿ
ಕಣ್ಣೆಳಸಿ ಎಳೆದಲ್ಲಲ್ಲಿ ॥ ಕುಣೀತsದ... ॥ ಹ್ಯಾಂಗ...

ಗೊಲ್ಲರ ಗುಡಿಸಲದ ಮ್ಯಾಲೆ
ಹೊಲೆಯರ ಹೊಲಗೇರಿಸುತ್ತ
ಯಾರಾರೂ ಇರದಲ್ಲಲ್ಲೂ ॥ ಕುಣೀತsದ... ॥ ಹ್ಯಾಂಗ...

ನೆಲದs ಹಿರಿತನಕಾಗಿ
ಜನಾ ಜನರ ಕೊಲ್ಲುವಾಗ
ಈ ಬಡತನವೇತಕೆಂದು ॥ ಕುಣೀತsದ... ॥ ಹ್ಯಾಂಗ...

ಅಡ್ಡ ಮಳೆಯ ಅಬ್ಬರದಲ್ಲಿ
ಕಸುವಿನ ಬಿರುಗಾಳಿ ಬೀಸಿ
ಮುಸುಕುವ ಕೆಂಧೂಳಿ ತೂರಿ ॥ ಕುಣೀತsದ... ॥ ಹ್ಯಾಂಗ...

ಕೋಲ್ಮಿಂಚಿದು ಹೊಳೆಹೊಳೆವಾಗ
ಗುಡುಗಾಡುವ ಗುಡುಗಿನಲ್ಲಿ
ಖಡಿಲ್ ಎಂದು ಸಿಡಿಲಿನ ಜತಿಗೆ ॥ಕುಣೀತsದ...॥ ಹ್ಯಾಂಗ...

ತೊಂಗೆಯ ಹೊಯ್ದಾಟದಲ್ಲಿ
ಗೊಂಚಲು ತಲೆದೂಗುವಾಗ
ಎಲೆಗಳ ಕೋಲಾಟದಲ್ಲಿ ॥ ಕುಣೀತsದ...॥ ಹ್ಯಾಂಗ...

ನಮನ

ಹವಳ ಮಲ್ಲಿಗಿ ಸುರಿಸಿ
ಮಾವು ಮಲ್ಲಿಗಿ ಹರಸಿ
ಎಲ್ಲರನೂ ಅಲ್ಲಿಗೆ ಕರೆಸಿ ॥ ಕುಣೀತಽದ... ॥ ಹ್ಯಾಂಗ...

ಹೂಗೊಂಚಲ ಸೆರೆಮನೆಯಲ್ಲಿ
ರಸ ಕುಡಿಯುವ ತುಂಬಿಗಳಲ್ಲಿ
ಝೇಂಕರಿಸುತ ನಿನದಿಸುವಲ್ಲಿ ॥ ಕುಣೀತಽದ... ॥ ಹ್ಯಾಂಗ.

ಹುಲಗಲ ಹೂ ಹುಣಿಸೆಗಳಲ್ಲಿ
ಬರದಂತೆ ರಂಗವಲ್ಲಿ
ಹೂ ಎರಚಿದ ರಂಗದಲ್ಲಿ ॥ ಕುಣೀತಽದ... ॥ ಹ್ಯಾಂಗ...

ಬಿಸಿಲಿರಲಿ ಹರಯದಲ್ಲಿ
ಒಲಿದವರೊಡನಾಟದಲ್ಲಿ
ಹಗಲೇ ಬೆಳುದಿಂಗಳೆನಿಸಿ ॥ ಕುಣೀತಽದ... ॥ ಹ್ಯಾಂಗ...

ಪಂಪನ ಬನವಾಸಿಯಲ್ಲಿ
ಎಂದೋ ವೈಶಾಖದಲ್ಲಿ
ಕುಣಿದರು ಅದು ಈಗೂ ಇಲ್ಲೀ ॥ಕುಣೀತಽದ... ॥ ಹ್ಯಾಂಗ.

ನಾ ಹೇಳುವ ಹಾಡಿನಲ್ಲು
ನೀ ಕೇಳುವ ಹೃದಯದಲ್ಲು
ಒಳಹೊರಗೂ ತಾನೆಲ್ಲೆಲ್ಲು ॥ ಕುಣೀತಽದ... ॥ ಹ್ಯಾಂಗ...

## ೧೧. ಓ ಆಷಾಢಾ

ಓ ಆಷಾಢಾ—ಆಷಾಢಾಽಽಽ
ಆಡಿಸ್ಯಾಡಬ್ಯಾಡಾಽಽಽ
ದುರುಳರ್ಹಾಂಗ। ನೆರಳು ಚಲ್ಲಿ
ಆಸೀ ಹಚ್ಚೀ। ಕಸಕೊಂಡ್ಹಾಂಗ
ಬಂತು ಮೋಡಾ। ಹೋತು ಮೋಡಾಽಽ
ನೋಡಾಽ ನೋಡಾಽ
ಹುಚ್ಚುಗಾಳಿ ಬೆನ್ನುಹತ್ತಿಽ ತಾನೂ ಕೂಡಾ ॥

ಹುಲುಗಲದಾಽಗಽ, ಗಿಲೀಗಿಲೀ ಅಂತಾಽವ। ಗಿಲಗಂಚೀಕಾಯಿಽ
ಹೊಟ್ಟೀಯೊಳಗಽ ಹೂರಣಿಲ್ಲಾಽ। ಬಿಡತಾವ್ರೋಽ ಬಾಯಿಽ
ಸೂಜೀಹಾಂಗ ಮೂಗ ಚಾಚ್ಯಾವ ಮಲ್ಲಿಗೀ ಜಾಜೀ (ಯೀ)
ಜೀ ಜೀ ಅಂತ ಅನಸಬ್ಯಾಡ। ಬೇರೀ ಮಾತು ನೆನಿಸಬ್ಯಾಡ
ಓ ಆಷಾಢಾಽ ಆಷಾಢಾ ಆಷಾಢಾ। ತಡಾಮಾಡಬ್ಯಾಡಾ.

ಮೊದಲ ಬಿತ್ತಿಗೀ ಮೊಳಕೀ ಒಡೆದು ಗೋಣು ಚೆಲ್ಲ್ಯಾವ
ತೂಕಾ ತಪ್ಪಿದ ಮೂಕ ಪ್ರಾರ್ಥನೀ ಮುಗಿಲಿಗೆ ಸಲ್ಲ್ಯಾವ
ಎಲ್ಲ್ಯಾವ ಎಲ್ಲ್ಯಾವ ಎಲ್ಲ್ಯಾವ ಮೋಡಾ
ಮಣ್ಣೆತ್ತೂನೂ ನೀರಡಿಸ್ಯಾವಽ
ಒಕ್ಕಲಿಗಽನ ಕಣ್ ಬಿಡಿಸ್ಯಾವಽ ಓ ಆಷಾಢಾ ॥

ಇಳೀಗೆ ಬೇಕು ಮಳೀ ಗೆಣೆತನಾ
ಅನ್ನಾ ಬೇಕು ಪ್ರಾಣಿರುತಾನಾ
ಜೀವಕ ಜೀವ ಸರಿ ಸಂತಾನಾ।
ಹುಟ್ಟಿತೆಂತೂ ತನ್ನಕ ತಾನಾಽ
ಹೇಳೋ ಜಾಣಾ ಓ ಆಷಾಢಾ.

ನಮುನ

ಬಂತು ಮೋಡಾ। ಹೋತು ಮೋಡಾ।
ತಿಳೀದಿದರ ಗೂಢಾ।
ನಿನಗs। ಅಂದರ್ಯಾರು ಬ್ಯಾಡಾ ಓ ಆಷಾಢಾ.

ಮೋಡದಲ್ಲಿ ಆರೂಢನಾಗಿ ಬಾ
ರೂಢಿಯೆಲ್ಲ ನಿನ ಹಾದಿ ನೋಡತsದ
ಬಾ ಅಂದರು ನೀ ಬರಾಂವಲ್ಲಾ
ಬಿಡು ಅಂದರೂ ಬಿಡಾಂವಲ್ಲಾ
ಆದರು ಜೀವಾ ಕರಿತಾವಲ್ಲಾ
ಓ ಆಷಾಢಾ ಆಷಾಢಾ ಆಷಾಢಾ

ಮೃಗಾ ಆತು ಮೃಗಜಲಾ। ಹೊಲಾ ಆತು ಬರಿ ನೆಲಾ
ಬಯಲು ಸೀsಮಿ ಆತು ಬೆಳವಲಾ
ಕೋಗಿಲ-ಕಂಠಾss ತಾ ಕೂತಿಲ್ಲಾ
ಕೂಗುವ ಕಸುವುನೂ ಸೋತಿಲ್ಲಾ
ಶ್ರಾವಣ ಬರುಮುಂಚೆ ನೀ ಬರಲಿಲ್ಲಾ
ಓ ಆಷಾಢಾ ಆಷಾಢಾ.

ಜಡೀ ಬಿಟ್ಟಕೊಂಡ ಮೃಗಾ ಕುಣೀಲಿ
ಜಗಾ ನೋಡತಿರಲಿ
ಕಸಾಕಡ್ಡಿ ಕೂಡ ಹಸಾ ಆಗಿ ಹೂ-
ಹಡಲಗಿ ಹೊತ್ತಿರಲಿ
ಏಳುವ ಬೆಳೀ ಬಾಳುವಿಗಾಗಿ
ಕತ್ತ ಎತ್ತಿರಲಿ. ಓ ಆಷಾಢಾ.

## ೧೨. ಗುಮ್ಮಾ ಗುಮ್ಮಿ

ಗುಮ್ಮಾ ಗುಮ್ಮೀ ಹೋಗಿ
ಇಮ್ಮಾನ ಸಂತೀಗೆ
ಒಮ್ಮಾನ ತಂದರ ಸಾಮಾನನ
ಡುಂ, ಡುಂ, ಡುಂ.
ಡುಂ, ಡುಂ, ಡುಂ.

ಇಟ್ಟೆರು ಬೆಳೀದಂತ
ಕೊಟ್ಟಾರು ಸೋಡೋಣಂತ
ಕೊಟ್ಟೊಮ್ಮೆ ನೋಡಿದರು ಸಾಮಾನನ
ಕೊಂಡೊಮ್ಮೆ ನೋಡಿದರು ಸಾಮಾನನ
ಡುಂ, ಡುಂ, ಡುಂ.
ಡುಂ, ಡುಂ, ಡುಂ.

ಕೊಟ್ಟೆರು ಉಳಿತಿತ್ತು
ಕೊಂಡದ್ದು ಬೆಳಿತಿತ್ತು
ಕಂಡಾಗ ಸೋಜಿಗಂತ ಕೊಂಡಾಡ್ಯಾರ
ಉಂಡಾರ ಉಣಸ್ಯಾರ. ಬಡ್ಡೀಸಿ ಬೆಳಸ್ಯಾರ
ನೆರಿಹೋರಿ ಸುತ್ತೆಲ್ಲಾ ಬಿತ್ತ್ಯಾಡ್ಯಾರ
ಡುಂ, ಡುಂ, ಡುಂ.
ಡುಂ, ಡುಂ, ಡುಂ.

ಬಿತ್ತೀದ ಭೂಮೆಲ್ಲ ಮುತ್ತೀನ ಗೊನಿ ಗೊನಿ
ಇದೇನು ಚಂದಂತ ಕೊಸೆದಾಡ್ಯಾರ
ಎಲ್ಲಿಂದ ಬಂತಂತ ನೆನೆದಾಡ್ಯಾರ
ನೆನೆಧಾಂಗ ನೆನೆಧಾಂಗ ಬೆಳಕೀಗೆ ಬಂದಾವ
ಮೊಳಿಕೆನು ಎಲ್ಲೊ ಗಿರಿಗಂವ್ಹರದಾಗ
ಉಳ್ಕೀಯ ನೆಲದಾಗ ಸಲಕೀಲೆ ಕೆದರಿದರು
ಅದರಡದ ಬೇರು ಬೇರು ಹರಿದಾಡ್ಯಾವ.

## ೧೩. ಅಳಿಯಾನ ಪತ್ರ ಬಂತು

ಅಳಿಯಾನ ಪತ್ರ ಬಂತು ಗೆಳೆಯಾನ ಅಕ್ಷರದಾಗ
ಫಳಿಸಾಳಿ ಇಲ್ಲದsನ ಜೋರಾ ।
ಕೆಲಸ್ಯಾರಿಗು ಕೆಲಸಾ ಐತಿ ಇವಗsನs ಕೆಲಸಿಲ್ಲಾ
ಮಸೀಗೆ ಕನ್ನಾ ಹಾಕ್ಯಾನ ಶೂರಾ

ಇತ್ತ ನೋಡs ಕತ್ತೀಕಾಲ್, ಒಂಟೀಕಾಲ್, ಜಂಟೀಕಾಲ್
ಕುದುರೀ ಕಾಲಿನ ಅಕ್ಷರಾ
ಒತ್ತರದಲೆ ಪತ್ರಾ ಬರದಾನ । ದಮುಡಿ ಕೂಡ ಹತ್ತರಿಲ್ಲಾ
ಮೊಸ್ನೆ ಮೊಸ್ನೆ ಆಗ್ಯಾನ ಸಾಕ್ಷರಾ

ಮಾತೋಶ್ರೀ ಅಂತ ಮ್ಯಾಲೆ ವಿಳಾಸ ಹಾಕಸ್ಯಾನ
ಹೆಂಡ್ತೀಗ ಬರಸ್ಯಾನ ಪತ್ತರಾ
ಶಿಪಾಯಿ ಆಗತಾನಂತ ರುಪಾಯಿ ಬೇಕಂತ
ಬರಿಬೇಕೇನು ಉತ್ತರಾ ?

ಲಂಚಾ ತಿನಸ್ತಾನ ಲಂಚಾನು ತಿಂಡಾನು
ಅದಕ್ಕ ಬೇಕಿವಗ ಹಣಾ
ಹಗಲೆಲ್ಲಾ ದುಡಿದರು ಹೊಟ್ಟೀನ ತುಂಬೂದಿಲ್ಲಾ
ಇಲ್ಲಿ ಬೀಳ್ತಾವ ನಮ್ಮ ಹೆಣಾ

ಹಣsದ ಅಂಕಿ ಮತ್ತ ತೀಡಿ ತೀಡಿ ಮೂಡಸ್ಯಾನ
ಸಹೀನ ಎಲ್ಲಾ ಮಜಕೂರಾ
ಜರೂರ ಜರೂರ ಅಂತ ಮೂರು ಸಲಾ ಬರಸ್ಯಾನ
ಎಲ್ಲೀನು ಇಲ್ಲ ನಮಸ್ಕಾರ.

# ೧೪. ದುಡ್ಡು—ದುಡಿತ

ದುಡಿತsನು—ದುಡ್ಡು ಕೂಡಿ । ಒಡೆತsನ ನಡೆಸಿದರ ।
ಕಡೆತsನ ಉಳಿದೀತು । ಕಾರಭಾರಾ ।
ಬಡತsನ ಬಂತಂತ । ಬೊಡ್ಡಿತsನ ಮಾಡಿದರ
ಬದುಕsನು ಆದೀತು । ತಲೆ ಭಾರಾ ॥
ಹಾ ಜೀ ಜೀ ಜೀ.

ಅತ್ತೀದು ಒಂದು ಕಾಲ ಸೊಸೀದು ಒಂದು ಕಾಲ
ಅವರವರ್‍ಗಿ ಅವರ ಕಾಲ ಬಂದೈತಿ
ಆಳಾವರ್‍ದು ಒಂದು ಕಾಲ ಆಳುಗಳಿಗೆ ಒಂದು ಕಾಲ
ದುಡಿದವ್ಗ ದುಡ್ಡಿನ ಕಾಲ ಬಂದೈತಿ ॥
ಹಾ ಜೀ ಜೀ ಜೀ.

ಅಜ್ಜಾ ಆರುತಲಿ ಮುತ್ತ್ಯಾಮೂರುತಲಿ
ಕಚ್ಯಾಡಿ ಗಳಿಸಿದ್ದು ಕಳಿದಾರೋ
ನಿನ್ನಿನ ಮಂದಿ ಇಂದsನ ಇಲ್ಲಾ
ಇಂದಿನವರು ಮುಂದ ಹ್ಯಾಂಗ ಉಳಿದಾರೋ ॥
ಹಾ ಜೀ ಜೀ ಜೀ.

ಕೈಕಾಲು ಕೂಡಿಕೊಂಡು । ಹೊಟ್ಟೀಗೆ ಹಾಕದಿದ್ದರ್
ರಟ್ಟೀಗೆ ಬಲಾ ಹ್ಯಾಂಗ ಬರಬೇಕು
ಸೆಟ್ಟಿ ಸಂಸಾರಂತ ಮೊಟ್ಟೆಯ ಕಟ್ಟಿಧಾಂಗ
ಹೊಟ್ಟೀನs ಬೆಳಿಸಿದರ್ ಹ್ಯಾಂಗಿರಬೇಕು ॥
ಹಾ ಜೀ ಜೀ ಜೀ.

## ನಮುನ

ಹೊಲಾ ಮಾಡುವವ್ಗ ಸೆಲಾನ ಇಲ್ದಿದ್ದರ್
ಬಲಾ ಹ್ಯಾಂಗಾರಿ ಅವಗ ಉಳಿದೀತು
ಹಲಾ ಹಲಾ ಅಂತ ಎತ್ತಿನ್ನಗುದ್ದಿಡರ್
ಬಿತ್ತಽದ ಹೊಲಾ ಹ್ಯಾಂಗ ಬೆಳದೀತು
ಹಾ ಜೀ ಜೀ ಜೀ.

## ೧೫. ಸಸಾರ ಅಲ್ಲವೊ ಸಂಸಾರ

ಸಸಾರ ಅಲ್ಲವೊ ಸಂಸಾರ
ಅದು ನಿಃಸಾರವು ಅಲ್ಲ ಪೂರಾ
ಇದ ತಿಳಿದೂ ಬಾಳುವವ ಧೀರಾ
ಅದೆ ಕವಡಿ ಅವೆ ಪಗಡಿ ಮತ್ತೆ
ಅದೆ ಕುದುರಿ ಕತ್ತೆ
ಅದೆ ಪಟ್ಟ ಹಾಸ್ಯಾರ ಮತ್ತೆ.

ಕವಡಿ ತೂರ್ಯಾಡಿದವು
ಪಗಡಿ ಹಾರ್ಯಾಡಿದವು
ಯಾರಿಗೋ ಬಿದ್ದವು ಲತ್ತೆ !
ಎಲೊ ಸುಮ್ಮನೆ ನೀನ್ಯಾಕಕತ್ತೆ ?
ಸೋಲಿಲ್ಲದೇ ಇಲ್ಲ ಗೆಲವು
ಇಂಥ ಆಟ ಆಗ್ಯಾವ ಹಲಕೆಲವು.

ಇದ ನೋಡಿ ಕಂಡರಿ ಚೆಲವೊ
ಅದೇ ಆಟಗಾರನ ಬಲವೊ
ಪೂಜಿ ಇದ್ದರೇನು । ಪೂಜಿ ಬಿಟ್ಟರೇನು
ಶುದ್ಧ ಲೇಖನ ಬೇಕೊ ಚದುರಾ
ಸಸಾರ ಅನಬ್ಯಾಡಾ ಸಂಸಾರಾ ॥

## ೧೬. ಇದು ನಾಟಕಾ—ಬರಿ ನಾಟಕಾ

ಇದು ನಾಟಕಾ । ಬರಿ ನಾಟಕಾ
ಆಡೋದು ನೋಡೋದು । ನಾಟಕಾ
ಕೊಡೋದು ಬಿಡೋದು । ನಾಟಕಾ
ಬರೆದದ್ದು ತೆರೆದದ್ದು । ನಾಟಕಾ
ಕರೆಸಿದ್ದು ಕಳಿಸಿದ್ದು । ನಾಟಕಾ
ಗಂಡು ಹೆಣ್ಣಿನ ವೇಷ । ನಾಟಕಾ
ಸಂಪ್ರೀತಿ ವಿದ್ವೇಷ । ನಾಟಕಾ
ಯಾರ್‍ಯಾರ ಹರ್ಷಕ್ಕೊ, ಯಾವ ಸಂಘರ್ಷಕ್ಕೊ, ಪ್ರತಿ ವರ್ಷಕ್ಕು ನಾಟಕಾ

ಕಣ್ಣುಮುಚ್ಚಿ ನೋಡೋದು ನಾಟಕಾ
ಕಣ್ಣು ತೆರೆದು ಕೊಡೋದು ನಾಟಕಾ
ಎಲ್ಲೆಲ್ಲಿ ನೋಟಕ । ಅಲ್ಲಲ್ಲಿ ನಾಟsಕ । ಕಾರಣ ಹಾಕ್ಯಾಟsಕ । ನಾಟಕಾ
ದಿಕ್ಕೆಟ್ಟು ನಡೆದಾವ ನಾಟಕಾ
ಒಕ್ಕಟ್ಟು ಬೇಡತಾವ ನಾಟಕಾ
ಇದು ನಾಟಕಾ ಬರಿ ನಾಟಕಾ.

## ೧೭. ದೇವೀ ಕ್ಷಮಾಪನ ಸ್ತೋತ್ರ

ಮಂತ್ರವರಿಯೆ, ನಾ ಯಂತ್ರವರಿಯೆ ನಾನರಿಯೆ ನಿನ್ನ ಸ್ತುತಿಯಾ।
ಆವ್ಹಾನವರಿಯೆ, ನಾ ಧ್ಯಾನವರಿಯೆ, ನಾನರಿಯೆ ಶ್ರುತಿಯ ಕಥೆಯಾ
ಮುದ್ರೆಗಿದ್ರೆಗಳ ಅರಿಯೆ ನಾನು, ಕೂಸಾಗಿ ತೆರೆವೆ ಬಾಯಿ।
ನಿನ್ನ ಅನುಸರಣ ಕ್ಲೇಶಹರಣ ಇದನೊಂದೆ ಬಲ್ಲೆ ತಾಯಿ॥

ಗೊತ್ತಿಲ್ಲ ವಿಧಿಯು, ಮೈಗಳ್ಳ ನಾನು, ಕೈಯಲ್ಲಿ ಕಾಸು ಇಲ್ಲ।
ನಡೆಯಲಾರೆ ಒಳಗಾಗಿ, ಚರಣ ಕೈಬಿಟ್ಟು ಜಾರಿತಲ್ಲ॥
ಕ್ಷಮಿಸು ಜನನಿ ಶಿವೆ ಸಕಲರನ್ನು ನೀ ಕೃಪೆಯಮೋರಿ ಕಾಯಿ।
ಹುಟ್ಟಬಹುದಲಾ ಕೆಟ್ಟಮಗುವು ಇರಲಾಸ ಕೆಟ್ಟ ತಾಯಿ॥

ನಿನ್ನ ಪುತ್ರರೆಷ್ಟೆಷ್ಟೊ ಸರಲರೆನಿಸಿಹರು ಭೂಮಿಯಲ್ಲಿ।
ವಿರಲ-ತರಲ, ಸ್ಥಿರವಿರಲೆ ಆರೆ ನಾನವರ ಸೀಮೆಯಲ್ಲಿ॥
ಬಿಡಬೇಡ ಕೈಯ, ಅದು ತಕ್ಕುದಲ್ಲ ಕೇಳವ್ವ ಶಿವನ ಜಾಯೆ।
ಕೆಟ್ಟ ಮಗುವು ಹೋ! ಹುಟ್ಟಬಹುದು ಇರಬಹುದೆ ಕೆಟ್ಟ ತಾಯೆ॥

ಜಗಜ್ಜನನಿ ನನ್ನಿಂದ ನಿನ್ನ ಪದಸೇವೆಯಾಗಲಿಲ್ಲ।
ದೇವಿ ನಿನ್ನ ಸಲುವಾಗಿ ನನ್ನ ಹಣ ವೆಚ್ಚವಾಗಲಿಲ್ಲ॥
ಇಷ್ಟಾದರೂನು ಆ ಸ್ನೇಹಕೆಣೆಯೆ ಮಮತಾ ಸ್ವರೂಪ ಮಾಯೆ।
ಕೆಟ್ಟ ಮಗುವು ಹುಟ್ಟ್ಯಾನು, ಕೆಟ್ಟವಳು ಅಹಳೆ, ಇಹಳೆ, ತಾಯೆ?

ಎಷ್ಟೆಂತ ಪೂಜೆ, ಎಷ್ಟೆಂತ ಸೇವೆ ದೇವರನೆ ಬಿಟ್ಟುಕೊಟ್ಟೆ।
ಎಂಬತ್ತರಾಚೆ ಇಳಿವಯಸು ಬಂತು ನಿನ್ನಲ್ಲಿ ದೃಷ್ಟಿ ನೆಟ್ಟೆ॥
ಓ ತಾಯಿ ನಿನ್ನ ಕೃಪೆ ಸಾಕು, ಉಳಿದವರು ಹಿಡಿಯಲೆನ್ನ ಬಿಡಲಿ।
ಆಧಾರವಿರದೆ, ನಾನಾರ ನಂಬಿ ಈ ಬಗೆಯ ಮೊರೆಯನಿಡಲಿ॥

ಓ ಅಪರ್ಣೆ ಆಕರ್ಣಗಳಲಿ ಬಿದ್ದಿರಲು ನಿನ್ನ ನಾಮ।
ಬಾಯಿಬಡಕ ನಾಯಡಗತಿಂಬ ಜನವಾಣಿ ಅಮೃತಧಾಮ॥

## ನಮನ

ರಂಕ ಕೂಡ ಆತಂಕವಿರದೆ ತಾ ಕೋಟಿ ಕನಕ ಪಡೆವ ।
ಜನನಿ ನಿನ್ನ ಜಪಮಹಿಮೆಯರಿಯದವ ಹೌದು ತೀರ ಬಡವ ॥

ಮೈಯ ತುಂಬ ಸುಡುಗಾಡ ಬೂದಿ, ವಿಷದೂಟ ಬಯಲನುಟ್ಟು
ಜಡೆಯ ಕಟ್ಟಿ, ಹಾವನ್ನು ತೊಟ್ಟು ಪಶುಪತಿಯೆ ಆಗಿಬಿಟ್ಟ,
ತಲೆಯಬುರುಡೆ ಕೈಯಲ್ಲಿ ಭೂತಗಣ, ಸುತ್ತಿಕೊಂಡೆ ಇರುವ ।
ನಿನ್ನ ಕೈಯ ಹಿಡಿದಿರುವ ಪುಣ್ಯದಲಿ ಈಶನಾಗಿ ಮೆರೆವ ॥

ಮೋಕ್ಷದಾಸೆ ನನಗಿಲ್ಲ ವೈಭವದ ಆಸೆಯಿಲ್ಲ ನಿವಕೆ ।
ವಿಜ್ಞಾನದಾಸೆ ಸುಖದಾಸೆ ಕೂಡ ಇನಿಸಿಲ್ಲ ಇಂಥ ಸ್ತವಕೆ ॥
ಅಂತೆ ನಿನ್ನ ಬೇಡುವೆನು ನಾನು ಆಮರಣ ತಪಿಸುತಿರಲಿ ।
ಓ ಭವಾನಿ ರುದ್ರಾಣಿ ಶಿವಶಿವೇ ಎಂದು ಜಪಿಸುತಿರಲಿ ॥

ವಿವಿಧವಾದ ಉಪಚಾರದಿಂದ ಆರಾಧನೆಯನು ಮಾಡೆ ।
ಒಣ ಒಣಕು ಮಾತು ಬರಿ ಚಿಂತೆಯಾತು ನಿನ್ನವನು ಎಂದು ನೋಡೆ ॥
ಓ ಶ್ಯಾಮೆ ನೀನೆ ನನ್ನಲ್ಲಿ ಕರುಣೆಯಲಿ ಕರಗಿ ನೋಡುತಿರುವೆ ।
ಅದು ನಿನಗೆ ಸಹಜ, ಇದು ನನಗೆ ಸಹಜ, ಕರುಣೆಯನೆ ಬೇಡುತಿರುವೆ ॥

ಆಪತ್ತಿನಲ್ಲಿ ನಾ ಮಗ್ನನಾಗಿ ಸ್ಮರಿಸುವೆನು ನಿನ್ನನೊಂದೇ ।
ಹೇ ದುರ್ಗೆ ನೀನು ಕಾರುಣ್ಯಪೂರ್ಣೆ ನಿನ್ನೆಡೆಗೆ ಅಂತೆ ಬಂದೆ ॥
ಇದು ಢೋಂಗು, ಡಂಭ ಬರಿದೆಂದು ತಿಳಿಯದಿರು ಭಾವ ಸಹಜ ತೆರನೇ
ಹಸಿವೆ ನೀರಡಿಕೆಯಿಂದ ಬಳಲಿದವ ತಾಯಿಯೆಡೆಗೆ ಬರನೇ ? ॥

ಜಗದಂಬೆ, ಬೇರೆ ವೈಚಿತ್ರ್ಯ ಬೇಕೆ ? ಕರುಣೆಯಲಿ ಮಾಡು ಎಲ್ಲ !
ಅಪರಾಧವೆಷ್ಟೆ ಮಾಡಿದರು ಮಗುವು, ತಾಯೇನು ಬಿಡುವದಿಲ್ಲ ॥
ಪಾಪಘ್ನಿ ನಿನ್ನ ಸಮರಿಲ್ಲ, ಪಾಪಿಯಲಿ ನನಗೆ ಇಲ್ಲ ಜೋಡು ।
ಮಹದೇವಿ, ಏನು ನಾ ಹೇಳಬೇಕೆ ? ಸರಿ ತಿಳಿದ ಹಾಗೆ ಮಾಡು ॥

## ೧೮. ಇರುಳಗಾಳಿ

ಯಾರದು ಕದಗಳ ಪಟಪಟ ಬಡಿದು
ದಡಬಡ ನುಗಿಸುವರು ?
ಯಾರದು ಬಾಗಿಲ ಚಿಲಕಗಳನ್ನು
ಕಿಲಿಕಿಲಿ ನಗಿಸುವರು ?

ಯಾರದು ಕಿಟಕಿಯ ಸಂದಿಗಳಿಂದ
ಕೈಗಳ ಚಾಚುವರು ?
ಯಾರದು ಸೀರೆಗಳನ್ನಲುಗಾಡಿಸಿ
ಮುಖ ಮರೆಮಾಚುವರು ?

ಹಳ್ಳ ಬಂದವ್ರೋ ಹೊಸ್ತಿಲವರೆಗೂ
ಸೋ ಎನ್ನುತ್ತಲಿವೆ
ಅರಳಿಮರದ ಎಲೆ, ತೆಂಗಿನ ಗರಿಗಳು
ಚಡಪಡಿಸುತಲಿವೆ

ಏನು ದಾಳಿಯೋ ! ಏಕೆ ಧೂಳಿಯೋ
ಎನ್ನುತ್ತಿಹೆ ನಾನು.
ನಿದ್ದೆ ತೊರೆದೆದ್ದ ಇರುಳಗಾಳಿಯೋ
ಇದು ಇರಬಹುದೇನು ?

## ೧೯. ಪರಿಯಾಳ್‌ನ ಹಾಡು

ಭೃಂಗದ ಜೋಡಿ। ಭೃಂಗಿಯ ಕೂಡಿ
ಶೃಂಗವನೂದುವೆ ಶೃಂಗಾರಿ
ಸುಮಮಧುಪಾನ। ಸುಮಧುರಗಾನ
ಬಸವನ ಪಾದದ ಮರೆಯಲ್ಲಿ ಶಿವ। ಶಿವನಾದದ ತೆರೆಯಲ್ಲಿ
ಮಲಗುವೆನಲ್ಲಿಯೆ ಮತ್ತೇರಿ

ಗೂಗೆಯ ಕೂಗನು ಕಿವಿಮರೆದೂಡಿ
ಬಾವಲಿ ಬೆನ್ನ ಸವಾರಿಯ ಮಾಡಿ
ಬೇಸಿಗೆಯಾಚೆಗೆ ತೂರುವೆ ಗಾಡಿ
ನಾ ಕಿಡಿಗೇಡಿ! ನನ್ನದೆ ಮೋಡಿ ಸ್ವತಂತ್ರನಾದೆನು ಸುಪ್ರೀತ

ತೊಂಗಲ ತೊಂಗಲ ತುದಿಯಲ್ಲೀ ತೂ-
ಗಾಡುವ ಹೂಗಳ ಬದಿಯಲ್ಲೀ
ನಾನು ಖಿಲಾಡಿ ಕುಣಿಕುಣಿದಾಡಿ ಆಡುವೆ ಹಾಡುವೆ ಸಂಗೀತ



## ೨೦. ಶೇಕ್ಸಪಿಯರ್ (ಪ್ರಣಯೋಕ್ತಿ)

ಬೆಳವಿಗೆಯ ಸುಳಿಯಲ್ಲಿ ಅಳಿವ ಸೂತ್ರ
ಪೂರ್ಣತೆಯ ಆಯುಷ್ಯ ಕ್ಷಣಿಕ ಮಾತ್ರ
ಜಗದ ಆಡಂಬರದ ರಂಗಭೂಮಿ
ನಕ್ಷತ್ರಯಾನದಲಿ ಪ್ರಳಯಗಾಮಿ
ಮರ ಬೆಳೆದ ರೀತಿಯೇ ನರನ ಉಳಿವು
ಒಂದೆ ಆಕಾಶದಲಿ ಬೆಳೆವು ಕೊಳೆವು
ತಾರುಣ್ಯದಲಿ ಕೊಬ್ಬು, ಮಾಗುವೆಯೆ ದೀನ
ವೃದ್ಧಿಯಲಿ ಸ್ಪರ್ಧಿಸುತ ಸ್ಮೃತಿ ವಿಲೀನ
ಸಂಹಾರಿಕಾಲ ವಿನಶನ— ಸಖ್ಯ ಬೆಳೆಸಿ
ಯೌವ್ವನದ ಹಗಲನಿರುಳಾಗಲೆಳಸಿ
ಅಚಿರಗೊಳಿಸುವ ಬಾಳಬೆಡಗ ನೆನೆಸಿ
ನಂಕಣ್ಗೆ ನಿನ್ನ ತಾರುಣ್ಯ ಚಿರವೆನಿಸಿ
ನನಗು ಕಾಲಗು ವೈರ ನಿನ್ನೊಲುಮೆಗಾಗಿ
ಕಳೆವನವ; ಉಳಿಸುವೆನು ನಾನು ಹೊಸತಾಗಿ.

# ೨೧. ಕೀಟ್ಸ್ (ಪ್ರಣಯೋಕ್ತಿ)

ತೀರೇನೊ ಏನೊ ಇರುತಿರುತ ಹೀಗೆ ಒಮ್ಮಿಗಿಲೆ ಒಂದು ಇರುಳು
ಉಳಿದೀತು ಕೆಲಸ, ನಿಂತೀತು ಕೈಯು, ನಿಂತಲ್ಲೆ ಉಳಿದ ತಿರುಳು
ಹರಗಿದ್ದೆ ಚೆಂದ, ಊಳಿದ್ದೆ ಲೇಸು, ಬಿತ್ತಿದ್ದೆ ಎಂಥ ಬೀಜ
ತಲೆಯೆಲ್ಲ ಕಾಶಿ! ಹೋ! ಗ್ರಂಥರಾಶಿ! ಮುಳುಗೀತೊ ಬಾನ ತೇಜ

ಕಣ್ಣಿದಿರು ಗಗನಮಂಡಲದ ಮಧ್ಯೆ ಗಂಧರ್ವನಗರವೊಂದು
ಕಟ್ಟಿತು ಕಃ  ಕಂಗೊಳಿಸಿ ಅದರ ಪ್ರತಿಬಿಂಬ ಇಳೆಗೆ ತಂದು
ಹಲಬಣ್ಣದಲ್ಲಿ ಕಟ್ಟೇನೆ, ಅದಕೆ ಕೊಟ್ಟೇನೆ ಮೂರ್ತರೂಪ
ಜಾರೀತೊ ನೋಡ ಆ ಕನಸು ಕೂಡ, ಆರೀತೊ ಇಲ್ಲಿ ದೀಪ

ಬರಿ ಮೂರು ದಿನದ ಹಳೆ ಮುರುಕದಲ್ಲಿ ಗರ್ಕಾದ ಹುಸಿಯ ಬೆಡಗಿ
ಯಾಕಾ ದಿಮಾಖು, ರುಚಿನೋಡು ಪಾಕ ಬಂದಾಗ ಹುಚ್ಚುಹುಡಿಗಿ
ಭಯದ ಮುಂಚೆ ಸಂಶಯವು ಬಂತು ಉಸಿರಡಗಲೇನು ಹೊತ್ತು
ರಾವಣಗು ಗೊತ್ತು, ರಾಮನಿಗು ಗೊತ್ತು, ಲೋಕಕ್ಕೆ ಸಾವೆ ಕುತ್ತು

( ಈ ಪ್ರಪಂಚ ಕೈ-ನೆಲ್ಲಿ ನಾಡೆ ಬಂದಿತ್ತು ದುಃಖ ಭರ್ತಿ )
ಇರವುಗಡಲ ತಡೆ ನಿಂತು ನೋಡೆ ನೆರೆ ಬಂತು ಬಂತು ಆರ್ತಿ
ಕಃ ಪದಾರ್ಥವೆನಿಸಿತ್ತು ಪ್ರೀತಿ! ಕಃ ಕಿಂ ಪದಾರ್ಥ ಕೀರ್ತಿ

## ೨೨. ಮಿಶೇಸ್ ಬ್ರೌನ್ನಿಂಗ್ (ಪ್ರಣಯೋಕ್ತಿ)

ಪ್ರೀತಿಸಲೆಬೇಕೆ ? ಪ್ರೀತಿಸು ಆದರೂ
ಪ್ರೀತಿಗಾಗಿಯೆ ಇರಲಿ; ಬೇರೆ ಎನ್ನದಿರು—
‘ ಆ ನಗೆಯು, ಆ ನೋಟ, ನುಡಿವ ಅಂದ
ಬಗೆಯೊಲಿವ ರೀತಿ ಇರಲೆಷ್ಟು ಚೆಂದ

ಯಾವದೋ ದಿನದ ಸವಿ ನೆನಪ ತಂದು
ತಿಂದ ತಂಬುಲ ನುರಿಸಿ ಓಹೊ! ರುಚಿ ಎಂದು—
ಪ್ರಿಯನೆ ನಂಬದಿರಿವನು, ಬೇರೆಯಾದಾವು
ಅದಕಾಗಿ ಒಲಿದವೇ ನಾವು ನೀವು

( ಇತ್ತ ಒಲಿದಾ ಒಲವು ಅತ್ತ ಒಲೆದೀತು )
ನನ್ನ ಕಂಬನಿ ತೊಡೆದ ನಿನ್ನ ಕರುಣೆ
ಆದಾಗ ನನ್ನ ಗತ ದುಃಖ ಸ್ಮರಣೆ
ಗತಿಸೀತು ಗತಿಸಿದಾ ದುಃಖದೊಡನೆ.
ಹೃದಯ ಕೊಟ್ಟವ ಹೃದಯದರಿವ ಕೊಡನೇ ?

ಪ್ರೀತಿಗಾಗಿಯೆ ಇರಲಿ ಪ್ರೀತಿ ಚಿರಕಾಲ
ಪ್ರಿಯಪ ಲಯವನುಸರಿಸಿ ಪ್ರೇಮಲೋಲ.

## ೨೩. ನೀಲ—ನಯನ

ಓ ನೀಲ ! ಗಗನದ ಭಾವ ಚಂದ್ರನ ಜೀವವಾಡುವ ಜೀಕವೋ
ರವಿಯ ಅರಮನೆ, ಚುಕ್ಕಿಚಿಕ್ಕಿಗಳೊಡನೆ ಮೆರೆಯುವ ಲೋಕವೋ

ಇಂದ್ರನೈರಾವತವು ಗೌರಿಯ ಗಜದೊಡನೆ ಆಡುವ ನಯ
ನೀಲದಾಡುಂಬೊಲವೆ ಇಂಬಿಗೆ ಹಿಗ್ಗಿ ಹೊಂದುವ ಆಶ್ರಯ

ಕಡಲ ಸುಂದರಿ ತನ್ನ ಬೆಡಗನು ಕಂಡುಕೊಳ್ಳುವ ಕನ್ನಡಿ
ನದೀನದಗಳ ಹಳ್ಳ ಹೊಳೆಗಳು ಸುಗ್ಗಿ ಬಂದರು ತನ್ನಡಿ

ಕೆಂಪೆ ಏರಲಿ, ನೊರೆಯ ತೂರಲಿ, ಸುತ್ತು ಹಸಿರನೆ ಹೀರಲಿ
ನೀಲಿಯಲ್ಲದೆ ಏನು ಬಿಂಬಿಸಬಹುದು ನೆಚ್ಚಿನ ನೀರಲಿ ?

ವಿಷ್ಣುಕಾಂತಿಯ ಗಂಟೆ, ಧತ್ತೂರದ ತುತೂ ತುತ್ತೂರಿಯು
ಅದೆಕೊ ಇಂದೀವರವು, ಭ್ರಮರದ ಕೂಡ ನಡೆದ ಫಿತೂರಿಯು

ಕಪ್ಪು ನೆರಳು ಘನ ಕಪ್ಪು ಇರುಳು ಘನಘನವು ಜೀವಗರಿಮೆ
ನೀಲನಯನ ಘನ ಏನು ಬಣ್ಣಿಸಲೆ ಅದರ ದಿವ್ಯ ಹಿರಿಮೆ.

# ೨೪. ಸ್ವಯಂಪ್ರಭೆ

ಚೈತನ್ಯ ಕಳೆಯ ಕಳಕೊಂಡು ಮೈಯು ಒಲಿದೊಲಿದು ಹಿಗ್ಗದಂತೆ
ಸಪ್ಪಗಾಗಿ ತೋರಿತ್ತು ಸಗ್ಗ ಹಳೆಪಳೆಯ ಕಗ್ಗದಂತೆ.
ಸಂಗೀತದಲ್ಲಿ ಸೌಂದರ್ಯ ಕಾಣೆ, ಅದು ಜಾಳು ನೇಯ್ಗೆ ಪಂಜಿ
ಕತ್ತಲನ್ನೆ ಪಡೆವಂತೆ ಬಯಲು ಬರಿ ಬಂಜೆಯಾಗಿ ಸಂಜೆ.

ರೂಪದಲ್ಲಿ ಇರಲಿಲ್ಲ ಚೂಪು ಆಗಿತ್ತು ಸರಿಸಪಾಟು
ಬಣ್ಣದಲ್ಲು ಕೊರೆದಿಲ್ಲ ಕಣ್ಣು ಇತ್ತಲ್ಲಿ ಚಿತ್ತು ಕಾಟು.
ಸ್ತಂಭ ರೋಗ ಬಡಿದಂತೆ ಇತ್ತು ನಂದನದ ವೃಕ್ಷರಾಜಿ
ಸುಣ್ಣದಂತೆ ಒಳ ಸುಡುತಲಿತ್ತು ದಿವಿಯಲ್ಲು ಮಲ್ಲಿಜಾಜಿ

ಮರದ ಚಿತ್ರಗಳ ತೆರದೊಳಿತ್ತು ಅಲ್ಲಿದ್ದ ಪಕ್ಷಿರಾಶಿ.
ಮಸಣವಾಗಿ ಪರಿಣಮಿಸಿದಂತೆ ಭೈರವನ ವಾರಣಾಸಿ.
ಅಮಾವಾಸ್ಯೆ ಬಂದಿತ್ತೊ ಏನೋ ಆವಾಗ ಚಂದ್ರ ಕಳೆಗೆ
ಸ್ವಯಂಪ್ರಭೆಯ ಆಯುಷ್ಯ ತೀರಿ, ಇಳಿದಿಳಿದಳಾಕೆ ಇಳೆಗೆ.

ದೇವಲೋಕದೊಳು ಪ್ರೀತಿ ಬೀಜಗಳ ಉಳಿಸಿಕೊಂಡ ಜೋಡಿ
ಜೀವಲೋಕದೊಳು ಬೆಳಸಿಕೊಳಲು ಬರಲಿಹದು ಮತ್ತೆ ಕೂಡಿ
ನೀರೆ ಆರಿ ಹಾರಿದರು ಬರದೆ ಪರ್ಜನ್ಯರೂಪ ವೃಷ್ಟಿ
ಪುರುಷ ಪ್ರಕೃತಿಗಳ ವಿರಹವೆಂತು ಸಹಿಸೀತು ಸಾವ ಸೃಷ್ಟಿ ?

## ೨೫. ಶ್ರದ್ಧಾನಂದ—ಸಂನ್ಯಾಸಿ

ಸಂನ್ಯಾಸಿ ! ನೀ ನಿನ್ನ ದಂಡದಂತೆ
ಇನ್ನು ಮುನ್ನೂ ಯೋಗಿಯಂತೆ ನಿಂತೆ
ಗೀತೆ ಹಾಡುವ ಆ[illegible] ತತ್ತ್ವದಂತೆ.
ಭೀತಿ ಮೀರಿದ ಬ್ರಹ್ಮ ಸತ್ತ್ವದಂತೆ

ಹೀಗೆಯೇ ನೀನಿದ್ದೆ ದೇಹವಿದ್ದಾಗ್ಗೆ
ಹಾಗೆಯೇ ನೀನುಳಿದೆ ದೇಹಬಿಟ್ಟಾಗ್ಗೆ
ನೆಚ್ಚಿದ್ದೆ ಹಿಗ್ಗಿದ್ದೆ ಇರು ತೀರುವಾಗ್ಗೆ
ಹೆಚ್ಚೇನು ಬ್ರಹ್ಮವನು ಸೇರುವಾಗ್ಗೆ

### ಶ್ರದ್ಧಾನಂದರ ಆತ್ಮಗೀತ ಉದ್ಗಾರ !

ಜಯ ಧರ್ಮವೇ ! ಜಯವೆ ! ಗುರುವರ್ಯನೇ
ಜಯ ವೇದಭೂಮಿಯೇ ! ಜಯ ಆರ್ಯನೇ
ಗುರುವೆ " ಶ್ರದ್ಧಾನಂದ " ಎಂದು ಕರೆದೆ
" ಹಿರಿದು ಇದುವೇ " ಎಂದು ಇಂದು ಅರಿದೆ
ನೀನಿಟ್ಟ ಹೆಸರಿಂದು ಹೆಸರಾಗಿ ಮೆರೆದು
ತಾನಾಗಿ ಆಗಿಹುದು ಆತ್ಮದಾ ಬಿರುದು

### ಕೊಲೆಗಡಕನಿಗೆ !

ಇರು ಯಾವನೇ ನೀನು ಮರುಳ ನೀನು
ಮರಣ ಬಯಸಿದೆ ಆದೆನಮರ ನಾನು
ಮತಭ್ರಾಂತನೇ ನೀನು ಮತಿಭ್ರಾಂತನಾದೆ
ಮಿತಿಮೀರದೊಲು ಇಂದು ನಾ ಶಾಂತನಾದೆ
ಕೊಂದು ಅಳಿಸುವೆನೆಂದು ನೀ ತಿಳಿದುಕೊಂಡೆ
ಹಿಂದಿಯರ ಹೃದಯದಲಿ ನಾನು ನೆಲೆಗೊಂಡೆ

ಹೋದೀತು ಎಂದೆಯಾ ಶ್ರದ್ಧೆಯೇ ಸತ್ತು !
ಆದರದು ಕ್ಷೇತ್ರದಲಿ ಬೀಜ ಬಿತ್ತು.
ನಂಬಿದವರಿಯೆ ಕಡೆಗು ತಾಳಿಬಾಳುವರು
ಹುಂಬರವರಿದಿರಲ್ಲಿ ಹೇಗೆ ತಾಳುವರು ?
ನಚ್ಚಿದವರಾಳುವರು ಕಡೆಯ ವರೆಗೆ
ಹುಚ್ಚೆದ್ದು ಹರಿದವರು ಕಣ್ಣ ಮರೆಗೆ.
ಹುಸಿ ಹೋಯಿತಲೆ ಮೂಢ ! ನೀನೆಸೆದ ಗುಂಡು
ಮಸೆಗಲ್ಲು ಅದು ಮುಸುಕಿ ಮನದ ಮೊಂಡು

## ಆರ್ಯರಿಗೆ !

ಮರುಗದಿರಿ, ಮರುಗದಿರಿ ! ಸಂನ್ಯಾಸಿ ನಾನು.
ಮರುಗದಿರಿ ನೀವೆಲ್ಲ ಆರ್ಯರಲ್ಲೇನು ?
ದೇಶ ಕಾರ್ಯವು ಮತ್ತೆ ಧರ್ಮ ಕಾರ್ಯ
ಈಶ ಕಾರ್ಯವು ಎಂದು ತಿಳಿದವನು ಆರ್ಯ
ಅಂಜುವವನಳುಕುವವನಾರ್ಯನಲ್ಲ
ಹಿಂಜರಿವ ಹೇಡಿಯುವನಾರ್ಯನಲ್ಲ
ರೊಚ್ಚಿನಿಂ ಶಪಿಸದಿರಿ ಕೊಂದವನ ಕುಲವ
ಹುಚ್ಚೆದ್ದು ಮರೆಯದಿರಿ ನಿಮ್ಮ ಬಲವ
ತಲೆಗಡಕ ಕೊಲೆಗಡಕರಿಗೆ ಧರ್ಮವಿಲ್ಲ
ತಲೆತಿರುಕ ಹೇಸದಂತಹ ಕರ್ಮವಿಲ್ಲ
ಭೇದವಿರಲೂಬಹುದು ಜಾತಿಯಲ್ಲಿ
ಭೇದಕ್ಕೆ ನೆಲೆಯಿಲ್ಲ ನೀತಿಯಲ್ಲಿ
ಎಲ್ಲ ಧರ್ಮಕೆ ಹೊರತು ಮೋಸಗಾರಿಕೆಯು
ಬಲ್ಲವರದಲ್ಲ ಕ್ಷುಲ್ಲಕರ ಹಾರಿಕೆಯು
ಇವರ ಹಾರಿಕೆಯೆಲ್ಲ ಮೇಲೆ ; ಕೆಳಕೆ
ಇವರು ಇಳಿವುದು ತೀರ ಪಾತಾಲ ತಲಕೆ

## ನಮನ

ಮರುಗದಿರಿ ಮುನಿಸದಿರಿ ಕೆಡದಿರಲಿ ಗಂಡು
ಮರೆಯದಿರಿ ಧೀರನೇ ಧರ್ಮದಾ ದಂಡು
ನಿಮ್ಮ ಶೋಕಕೆ ಬರಲಿ ದಯೆಯ ರೂಪ
ಹೊಮ್ಮುತ್ತಿರಲುತ್ಸಾಹ ಬೇಡ ಕೋಪ

## ಶಾಸನ

ನಿಮ್ಮ ಕುಲವನು ಕಾಯ್ವ ಛಲವು ಇರಲಿ
ನಿಮ್ಮ ಧರ್ಮದಿ ನಡೆವ ಬಲವು ಬರಲಿ
ಆಗದಿರಿ ಆಗದಿರಿ ಷಂಡರಂತೆ
ಆಗಿರೆನ್ನಯ ಕೈಯ ದಂಡದಂತೆ

# ೨೬. ವೃದ್ಧ !

ರಸವು ಸೀಪಿದ ಮೇಲೆ ಒಗೆದ ಸಿಪ್ಪೆ
ತಿಳಲು ತೀರಲು ಒಣಗಿ ಬಿದ್ದ ಗೊರಟ
ಮನೆ ಮುರಿದ ಮೇಲೆ ಹರಹಿರುವ ತಿಪ್ಪೆ
ಬರಿಯ ಎಲುಬಿನ ಗೂಡು ಶುದ್ಧ ಒರಟ.

ಮೊನ್ನೆ ಬೆಳದಿರಬಹುದು ಅವನ ಮೀಸೆ, ಗಡ್ಡ ಉದ್ದಾ
ತಲೆ ಬೋಳ, ಮನೆ ಬೋಳ ಅವನು ನಿನ್ನಿದ್ದಾ
ಇಂದು ಸಾಲ್ವರ ಹೆಗಲ ಮೇಲೆ ಎದ್ದಾ
ಕಿಚ್ಚಿನಲ್ಲೋ ಮಣ್ಣ ಕುಣಿಯಲ್ಲೊ ಬಿದ್ದಾ
ಹಿಂದುಳಿಯಲಿಲ್ಲ ಹಿಡಿ ಬೂದಿ, ಶುದ್ಧಾ
—ಈಗ ಉಳಿದುದದೇನು ?
ಅಲ್ಲಿ ಮನೆ ಮಾಡಿಹವು ಇರುವೆ ಗೊದ್ದಾ

ಯಾವನಾ ಜೀವನವೆ ಕವನವೆನೆ ಪವನನಲಿ
ತನನ ತಂತಿಯ ಮೀಟಿ ತಣಿಸುತಿಹುದು
ಅವನೆಂಥ ವೃದ್ಧ ?
ಅವನೆ ಬುದ್ಧಾ.

ಮರಣದ ರಣಾಂಗಣದಿ ಅವನೆ ಗೆದ್ದಾ
ಅವತಾರ ವಿಷದಿಂದ ಉದ್ಧರಿಸಲೆದ್ದಾ
ಹುಟ್ಟಿದಾಗೆಂತಿದ್ದ ಹಾಗೆ ಇದ್ದಾ
ಮಾತೃವಾತ್ಸಲ್ಯಾವತಾರ ಸಿದ್ಧಾ.

## ೨೭. ತಂಗಿ ಗೌರಮ್ಮ

ಜಲದೇವತೆ ವನದೇವತೆ ಒಂದೆಡೆಯಲಿ ಸೇರಿ
ಬಿನದಿಸುತಿಹ ಹೊಳೆಮಡುವಿಗೆ ಸೀಸೀಸಲು ಹಾರಿ
ತಾಯೊಡಲನು ಕೂಸಾಟಕೆ ತಾಯ್ಮಡಲಿಗೆ ಬೀರಿ
ತೀರಲು, ಜಡವಾಗಳೆ ಕಾವೇರಿಯೆ ತಂಪೇರಿ ?
ನೆನೆದರೆಯೇ ನಾ ನಡುಗುವೆ ಇದು ಆದುದದೆಂತೋ ?
ಎಲ್ಲಿಂದೀ ಎಳೆಜೀವಕೆ ಸಾವೆಂಬುದು ಬಂತೋ ?
ಪತಿಯೊಲವಿನ ಸುತನೊಲವಿನ ಕೆಳೆಯೊಲವಿನ ತಂತು
ಜಗ್ಗದೆ ನಿನ್ನನು ಮೇಲಕೆ ನೀ ಮುಳುಗಿದೆಯೆಂತು ?

ಗೌರವಸ್ತ್ರ ಗೌರಸ್ಮಿತ ಗೌರವದೀ ಗೌರೀ
ಮಿಂಚಿದಳದೊ ಬಾನಂಚಿಗೆ ಕಾವೇರಿಯ ಕುವರಿ !
ಬೆಳುದಿಂಗಳೆ ಕರುವಿಟ್ಟಿತೊ ಈ ನಿರ್ಮಲಮೂರ್ತಿ
ಮೊದಲಿಲ್ಲಿಯೆ ಕುಡಿಬಿಟ್ಟಿತೊ ಮುಗುಳಿಟ್ಟಿತೊ ಕೀರ್ತಿ ?
ಉಷೆ ಸುರಿಸುವ ಇಬ್ಬನಿಯೊಲು ಕರುಣೆಯ ಕಂಬನಿಯ
ಬಾಳ್‌ಬಳ್ಳಿಗೆ ಬೀರಿದೆ ನೀ ಮಧುಹಾಸ್ಯದ ಹನಿಯ.

## ೨೮. ಬರುವರು ಬರುವರು

ಸಮರದಲ್ಲಿ ಅಮರರಾದ ಧೀರ ಪೂರ್ವಜರು ಅವರು
ಈ ನಾಡು ಅವರ ತವರು
ನೂರು ವರ್ಷ ಆದರೇನು ಬಂದೆ ಬರುವರು
ಬಂಧನದಾ ಕುಣಿಕೆ ಬಿಚ್ಚಿ ಮುಕ್ತಿಮಾಲೆ ತರುವರು
ಬರುವರುಃ ಬರುವರುಃ ಬಂದೆ ಬರುವರುಃ
ಬಂಧನ ಬಂದಷ್ಟು ಸಲವು, ಸ್ವಾತಂತ್ರ್ಯ ತರುವರು
ಅದರ ಹೊಣೆಯ ಹೊರುವರು

ಏನೆ ಇರಲಿ ಅಜ್ಞತೆಃ
ಇರ್ಕೋ ಈ ಕೃತಜ್ಞತೆಃ
ಜಾನಪದದ ಎಲ್ಲ ಜನತೆ
ನಾಗರಿಕರ ನಾಗರಿಕತೆ
ನಾಳೆ ಬರುವ ಪ್ರಳಯ ಕಂಡು
ಇಂದು ಎಚ್ಚತ್ತಿದೆ
ಹೃದಯ ಹೃದಯದಲ್ಲಿ ಅವರ
ನೆನವು ಅಚ್ಚೊತ್ತಿದೆ

ಬರುವರುಃ ಬರುವರುಃ ಬಂದೆ ಬರುವರುಃ

ಋತುಮಾನದ ಚಕ್ರವುರುಳಿ ಶತಮಾನವು ಆಯಿತೋ
ವೀರಸರೋವರದೊಳಿರುವ ಉತ್ಸಾಹದ ಕಮಲವೇನು
ತಾನು ಮ್ಲಾನವಾಯಿತೋ ?
ಸ್ಮರಣೆಗೇನು ಮರಣ ಬಂತೆ
ನೂರು ವರ್ಷವಾದುವಂತೆ
ಇಂದಿನ ಈ ಉತ್ಸವದೊಳು ತೀರದ ಈ ವೀರರಸದ
ದಾನವಾಯಿತೋ ?

## ನಮನ

ಅವರ ನೆನವಿನಾ ಸುಗಂಧದಿಂದ
ಬಂದ ಜೀವನಾ
ಆಯಿತಿಂದು ಪಾವನಾ
ಆಡುತಿರಲಿ ಒಳಗೆ ಹೊರಗೆ ಅದೇ ಉಸಿರು
ಬಾಯಿ ತೆರೆದು ಆಡಲೇಕೆ ಅವರ ಇವರ ಹೆಸರು

ಅವರ ಸಂಖ್ಯೆ ಕೋಟಿ ಲಕ್ಷ
ಭರತಖಂಡ ಕಾರ್ಯದಕ್ಷ
ಹಿಮಾಲಯದ ಅಧ್ಯಕ್ಷ
ಮೂರು ಸಾಗರದ ಯಕ್ಷ
ಹರಸುತಿರಲಿ 'ರಕ್ಷ ರಕ್ಷ'

ಭಾರತದಾ ತರುವರದಲಿ
ಹೂವು ಅರಳಿ ಅನುವರದಲಿ
ಪುಷ್ಪವೃಷ್ಟಿಯಾಗಲಿ
ಜೀವ ತುಷ್ಟಿ ಸಾಗಲಿ.
ಬರುವರುಃ ಬರುವರುಃ ಬಂದೆ ಬರುವರುಃ

ಈಃ ಮಳೆಗೇ ಬರಲಿ ಮತ್ತು
ಹಸಿದ ಬಾಯ್ಗೆ ಅಮೃತ ತುತ್ತು
ಹೃದಯದಲ್ಲಿ ಮಾತು ಮುತ್ತು
ಬಿತ್ತೊ ಬಿತ್ತು ಶ್ರಾದ್ಧ ದಿನಕೆ ಶತಮಾನದ ಹಸಿಹನಿ
ಜನನ ರಹಿತ
ಮರಣ ರಹಿತ
ಉಲಿದಿತಾ ಶ್ರುತಿಧ್ವನಿ.

ಶ್ರದ್ಧೆ ಇರಲಿ, ನಿಷ್ಠೆ ತರಲಿ ಪೌರುಷ ಪ್ರಸಾದವು
ಪ್ರಾಣದೇವ ಬೀಜ ಹುಟ್ಟಿ
ಶರಣರೈಕ್ಯ ಕಟ್ಟಿ ಕಟ್ಟಿ
ಮುಕ್ತಿ ಫಲವು ಭಕ್ತಿಯಲ್ಲಿ ತುಂಬಿಬರಲಗಾಧವು.

ಜೀವನವ್ರೋ ಕುರುಕ್ಷೇತ್ರ
ಮುಕ್ತಧರ್ಮ ಸದಾ ಕ್ಷಾತ್ರ
ದೇವ ಜೀವನಕ್ಕೆ ಪಾತ್ರ
ಇದು ದೇವನ ಕರುಣ ಸೇತ್ರ
ವೈರ ಬೇಡ, ಸ್ವೈರ ಬೇಡ, ವಿರಸ ವಿಷವ ತೊಳೆಯುವಾ
ವೀರಧರ್ಮಸಾರ ಅಮೃತವೆಂದು ಬೆಳೆಯುವಾ
ವೀರವನ್ನು ನೆನೆದು ನೆನೆದು ವೀರರಾಗಿಯುಳಿಯುವಾ

ಬರುವರೋ
ಬರುವರೋ
ಬರುತಲಿರುವರು

ಅವರು ನಮ್ಮ ಗುರುವರು
ನಾಡ ನೊಗವ ಹೊರುವರು
ದ್ವೇಷವನ್ನು ಹರುವರು
ನಮಗೆ ಕೀರ್ತಿ ತರುವರು
ಬರುವರುಃ ಬರುವರುಃ ಬಂದೆ ಬರುವರುಃ

# ೨೯. ಇದು ಸ್ವಾತಂತ್ರ್ಯವೊ ?

ಸ್ವಾತಂತ್ರ್ಯವೋ ಇದುವು ಯಾ ತಂತ್ರವೋ
ಬಲ್ಲವರ ಕೈಗೆ ಬಾಗುವ ಯಂತ್ರವೋ.

ಈ ಗೀತ ಯಾವಾತ ಕಲಿಸಿದನು ನಿನಗೋ
ಆ ಮಾತ ನುಡಿಸುತಿದೆ ಪ್ರೀತಿ ನಿನ್ನೊಳಗೋ

ಸೋತೆ ಸೋತೆನು ಎಂದು ಸಾಯುವೊಲು ಕೀರುತಿದೆ
ಗೀತದೊಳೆ ಹೀರುತಿದೆ ಜೀವರಸವ
ತನ್ನ ಕಸುವನ್ನೆಲ್ಲ ಕಸವೆಂದು ಎಸೆಯುತ್ತ
ಜೋಗ ಪ್ರಪಾತವೆನೆ ಧುಮುಕಿ ಕೆಳಗೋ

ಆ ಲಯವೊ ಯಾ ಲಯವೊ, ಪ್ರಾಲೇಯ ಪರ್ವತದ
ಗರ್ವವೆ ವಿಗುರ್ವಿಸುವ ಘನ ಹಿಮಾಲಯವೋ
ಭಯವೊ, ಅಭಯವೊ, ಏನು ಉಭಯವೋ, ಈ ನಯವೋ
ಪ್ರಳಯ ಮೇಘಂಗಳಾ ಗುಡುಗು ಮೊಳಗೋ

ಕತ್ತಲೆಯ ಕೆಚ್ಚಿನಲಿ ಕಿಚ್ಚನಟ್ಟಂತೆ ತಾ
ಸ್ವಚ್ಛಂದದಲಿ ತುಳಿದ ಹಾದಿ ಬಿಟ್ಟೋ
ಧೂಮಕೇತುವಿನಂತೊ, ಭೂಮಸೇತುವೆಯಂತೊ
ಯಾವನುಗ್ರಹದಿಂದ ಸಿಡಿದ ಬೆಳಗೋ.

## ೩೦. ಸ್ವಾತಂತ್ರ್ಯದ ವರ್ಧಂತಿ

ಕಾಲ ಉರುಳಿ, ಋತುವು ಮರಳಿ, ಬಂತು ನಮ್ಮ ಶ್ರಾವಣಾ
ಹೊಲಕೆ ಪಯಿರು, ನೆಲಕೆ ಪಸಿರು, ಪಚ್ಚವಾಯ್ತು ಸಿರಿವನಾ
ಬಂಧನವನು ಬಿಡಿಸಿ ಬಿತ್ತಿ ಬಾಂಧವ್ಯದ ಭಾವನಾ
ಜನ ಜನವೂ ಸೃಜನಶೀಲ—ಸ್ವಾತಂತ್ರ್ಯದ ಜೀವನಾ.

ಹೋರಾಟವು ಇನ್ನೂ ಇವೆ ; ಇನ್ನೂ ಇವೆ ಸಾಧನಾ
ಮುಕ್ತರಾದ ಪ್ರಜೆಗಳಿಗೂ ಧರ್ಮದ ಆರಾಧನಾ
ಸ್ವೈರತೆಗೂ ಸ್ವಾತಂತ್ರ್ಯಕು ಇಹುದು ಅಜಗಜಾಂತರಾ
ಸುವ್ಯವಸ್ಥೆ ಮಹಾತಂತ್ರ, ಬದ್ಧತೆ ಬರಿ ಯಂತರಾ.

ಹುಟ್ಟು ದಿನವೊ, ಬೆಳೆದ ದಿನವೊ ಮತ್ತೆ ಬಂತು ಈ ದಿನಾ
ದುಡಿಯಬೇಕು, ಕಟ್ಟಬೇಕು ಪ್ರಜಾರಾಜ್ಯ ಜನಮನಾ
ಕೊಲ್ಲಬೇಕು ಸಾಯಬೇಕು ಎನುವಗೋ ರಣಾಂಗಣಾ
ಬದುಕುವವಗೆ ಕೋಲಿನಾಟ, ಬಾಳು ಜೀವರಿಂಗಣಾ.

ಹಡೆದರಾಯ್ತು ? ಪಡೆಯಬೇಕು ಪಡೆದವರಿಗೆ ಶಿಕ್ಷಣಾ
ಪಕ್ಷ ಪಕ್ಷ ಕಟ್ಟಿದರೂ ಬೇಕು ಶೀಲರಕ್ಷಣಾ
ಮತದ ಹೆಮ್ಮೆ, ಬರಡು ಎಮ್ಮೆ, ಸುಫಲವಹುದು ಎಚ್ಚರಾ
ಮನೆಯ ಸುಟ್ಟು ಮಾರ ಸುಟ್ಟು ಅಡಗಬಹುದು ಮಚ್ಚರಾ.

ಅಜ್ಞಾನವ ದಾಟಿ ಬರಲಿ ದೇವತೆಗಳ ಔರಸ
ಅಹಂಕಾರ ಮೀಟಿ ತರಲಿ ಜನದ ದಿನದ ಪೌರುಷ
ಬಾಳಬೇಕೊ ? ತಾಳಬೇಕು, ಮೇಳಬೇಕು ಜನರಲಿ
ತಾಳವೃಕ್ಷದಂತೆ ನಮ್ಮ ಬಾಳೆ ಸತತ ಕೊನರಲಿ.

## ನಮನ

ಭಾರತೀಯ ಸ್ವಾತಂತ್ರ್ಯವು ಉದ್ಧವಿಸಿದ ಈ ದಿನಾ
ವರುಷ ವರುಷ ಮರಳಿದರೂ ನಮಗೆ ನಿತ್ಯನೂತನಾ
ಈಶಭಕ್ತಿ-ದೇಶಭಕ್ತಿ ಸಾಮರಸ್ಯ ಕ್ಷೇತ್ರದಿ
ಕಂಡೆವಣ್ಣ ಬೇರೆ ಕಣಸು ನಮ್ಮ ಹೃದಯ ನೇತ್ರದಿ.

ನೆಲದಲ್ಲಿಯು, ಜಲದಲ್ಲಿಯು, ಗಾಳಿಬಾನಿನಲ್ಲಿಯೂ
ಕ್ರೀಡೆಯಾಡಿ ಪಡೆಯುತಿರಲಿ ಗೌರವವನು ಎಲ್ಲಿಯೂ
ಸ್ವಾತಂತ್ರ್ಯದ ಮುದ್ರೆ ಕಂಡು ಅವ್ಯವಸ್ಥೆ ಓಡಲಿ
ಸ್ವೈರ-ವೈರ ಇಂಗಿಹೋಗಿ ಸುವ್ಯವಸ್ಥೆ ಮೂಡಲಿ.

ಅಗೊ ಅಗಸ್ತ್ಯ ಉದಿಸಿ ಬಂದ, ಬಂಧ ಎಂದೊ ಕಳೆದಿವೆ
ನವಜೀವನ ಸುಪ್ರಬಂಧ ಕಟ್ಟುವದೋ ಉಳಿದಿದೆ
ಕುಶಲ ಕರ್ಮದೊಡನೆ ಬೇಕು ಧರ್ಮದೊಂದು ತಳಹದಿ
ಆ ಜೀವನ ಕುಡಿಸುತಿರಲಿ ಶ್ರಾವಣದೊಳು ನದ-ನದಿ.

# ೩೧. ತಾಂಡವ

ಇದು ರೌದ್ರಾವೇಶ—ನಾಶ—ಪ್ರಥಿತ ರಭಸಕೆ
ಅಕ್ಷೋಭ—ಸಂಜಾತ—ವೇಷಂ....
ಇದು ಆಶಾ-ಕೇಶ-ಪಾಶ-ಗ್ರಹಣಸಮಯ, ಕೋ
ಇಂದು ಬಂದಿತ್ತಕಸ್ಮಾತ್....
ಇದು ಕಣ್‌ಕಾಣುವ ಕಾಣ್ಕೆ
ಕಾಣೊ ಇದು ಮಣ್-ಮಾಣ್ ಎಂದು ಮಾತಾಡದೋ
ಇದು ಜೀವತ್-ಶವ-ಭಾವ-ನಾಟಕಂ—ಎಲಾ!
ಸಾಕ್ಷಿತ್ವ—ಸಾಮಾನ್ಯಮೇ ?

o o o o

ಭೇದಾ—ವಿರೋಧಾ
ತರ್ಕೊ, ತ್ವೇಷಾ-ದ್ವೇಷಾ
ಛಲಾ, ರೌದ್ರಾವೇಶಾ.
ವೀರದ ವಿಕೃತಿಯ ವೈರವು
ಸಂಹಾರದ ಭಾವಾ
ಅನಸೂಯೆ ಅಭಾವ !
ನೋವೋ ಸಾವೋ
ಬಾಳುವೆ.
ಪೊಳ್ಳಾಗಿಹ ಶೂನ್ಯ.
ಪೂರ್ಣದ ಹೂರಣ ಹೊರಬಿದ್ದಿದೆ ಉಳಿದಿದೆ ದೈನ್ಯ.
ಭೂತಂಗಳ ಪೈಶಾಚಿಕಗೊಂದಣ ಪೈಶೂನ್ಯ
ಓ ದೆವ್ವಾ ಹಾ ದೈವಾ
ಏನಿದು ಮಾದೇವಾ ? ಶಿವಶಿವ ಕ್ರಿಮಿ ಕೀಂವಾ
ಈ ಭವದೊಳು ಶವ ತುಂಬಿವೆ
ಎಲ್ಲಿದೆ ನವನವತೆ
ಇದೆ ವಿರಸದ ಕವಿತೆ.

o o o o

## ನಮನ

ಕಶ್ಯಪ — ಪಶ್ಯಕ ಹಾಡಿದನು —
ವಸುವಿನಲ್ಲಿ ಸುಧೆ ಧಾರೆ-
ಹರಿಯುವದ ನೋಡಿದನು
ರವಿ ಮೂಡಿದನು, ಶಶಿ ಮುಳುಗಿದನು.
ಧರೆಯು ವಸುಂಧರೆ
ದೇವಕಿ ಬಂಧುರೆ
ವಾಸುದೇವನನು ತನ್ನೊಳು ಪಡೆದಿರೆ

' ಈಶಾವಾಸ್ಯಮಿದಂ ಸರ್ವಂ '
ಸೋರಿತು ಗರ್ವಂ; ಕುಣಿದನು ಶರ್ವಂ
ಅಬ್ಜಂ ಖರ್ವಂ ನರನಾರಾಯಣ ನವಕೋಟಿ
ಆಚೆ ಈಚೆ ಎರಡೂ ದಾಟಿ.

ಪೊಸದಿದೆ ಬಂಧ — ನವಸಂಬಂಧ
ಕಂಠದ ಮಾಲೆ — ಹೃದಯದ ಮೇಲೆ
ಮೌಕ್ತಿಕ ಮೌಕ್ತಿಕ ನವರತ್ನ
ಅಲ್ಲಿದೆ ನಾಳಿನ ಬಾಳಿನ ಯತ್ನ
ಸಹಜದ ಸಂಬಂಧ ಪ್ರಯತ್ನಕ.

ಮೂಗುತಿ ಜೋತಿದೆ ಮೂಗಿನ ನೇರ
ನಯನದೊಳರಳಿರೆ ಚಂದ್ರಕಿಶೋರ
ಅಧರೋತ್ತಮಗಳ ಮಧ್ಯಮದಲ್ಲಿ
ಮೂಡಿರೆ ಸ್ಮಿತವಸ್ಮಿತೆಯಂತೆ

## ಸಪುನ

ಸಂಯಮ ಮೊಳೆತಿತು ಉದ್ಯಮದಲ್ಲಿ
ಯಮುನಿಗೆ ಪ್ರೇಮವು ಇದಿರಾದಂತೆ
ಉದ್ಭವ ಏನಿದೆ ಬಲ್ಲವನಾರು ?
ಆದರು ಪಾರುವನೇ ಪಾರು ! ಹಾರುs! ಹಾರುs!
ಪಾರ್ವತಿಯನು ಸೇರು.

o o o

ಬೌದ್ಧಿಕದ ಶೃಂಗದಲಿ
ಏನೋ ಅಭಂಗದಲಿ
ನಿಂತಿಹವು ಪದಗಳೆರಡು.
ಎರಡರೊಳು ಒಂದಿಹುದು
ಆದರಲ್ಲೆ ಸಂದಿಹುದು
ಹಿಗ್ಗಿ ನುಡಿಯುತ್ತಲಿದೆ—ಹರಡು, ಹರಡು.

o o o o

ಬ್ರಹ್ಮಾಂಡದ ಕೋದಂಡವೆ ಆಗಿ
ಬ್ರಹ್ಮವಾಯು ಪ್ರಸ್ಫುರಿಸುತಿದೆ
ಏರುತಿದೇs ಇಳಿಯುತಿದೇs
ಹೃದಯದಲ್ಲಿ ಬೆಳಕುರಿಯುತಿದೆ
ಚಂದಿರ ನೇಹವು ಸುರಿಯುತಿದೆ
ಹಸಿರ್ಮುರಿಯುತಿದೆ
ಏನೋ ಬರುತಿದೆ—ಬರುತಲಿದೆ.

## ೩೨. ರೌದ್ರದರ್ಶನ

ಬೆಳಕಿನ ಒಡೆಯಗೆ
ಬೆಂಕಿಯ ಬಾಯಿ
ಸಾಕುವ ಹೊಟ್ಟೆಯು
ಕಲ್ಲಿನ ಕಾಯಿ.

ಇರುಳಿನ ದನಿಯೋ
ಎನುತಿದೆ ಸಾಯಿ
ಏನಿದೊ ಒಕ್ಕೂಟಾ !

ಆತ್ಮದ ಬಿರುಕಿನ ಒಳಗೇಽ-
ಹೆಟ್ಟಿದೆ ಈ ಗೂಟಾ
ವಿಷ—ಕಾಳ—ಕೂಟಾ !

ಭಂಗಿತವೀ ಸಂಗೀತವು
'ಗುಂ' ಎಂದಿತು ಮೌನ
'ದಿಂ' ಎಂದಿತು ಧ್ಯಾನ.

ನೀರಿಲ್ಲದೆ ಬೆವರಿಲ್ಲದೆ
ಇದೆ ಗಂಗಾಸ್ನಾನ
ಏನಿದೆ ಅನುಮಾನ ?

ಲುಕುಲುಕು ಲುಕುಲುಕು
ಮಿಣುಕುತ್ತಿವೆ ಚಿಕ್ಕೆ
ಬಂಡಾಯವನೆಬ್ಬಿಸುತಿವೆ
ಚಂಡಾಂಶುವಿನಂತೆ

## ನವನ

ಸೃಷ್ಟಿಸಲೆನೆ ಕೆಣಕುತ್ತಿವೆ
ಬ್ರಹ್ಮಾಂಡದ ದಿಕ್ಕೆ
ಬ್ರಹ್ಮ ಕಪಾಲವು ತುಂಬಿತು
ಸೂಸಲಿ ರಸಭಿಕ್ಷೆ
ಅನುಭೂತಿಯ ರಕ್ಷೆ.

# ೩೭. ಸಂಧಿಕಾಲ

ಅಹಂ—ಕೇಂದ್ರ
ನಾನೆ ಚಂದ್ರ—ನಾನೆ ಇಂದ್ರ
ನನ್ನದೇನೊ ಕೃಷ್ಣಪಕ್ಷ—ಆದರೂನು ಶುದ್ಧವು
ತಾರತಮ್ಯದಿಂದ ನೋಡೆ—ಅದೇ ನಿಯಮಬದ್ಧವು.
ಅದ್ವೈತ ಅಧ್ವಾನ—ನಮ್ಮ ಅಧ್ವಮಾಧ್ವವು
'ನಿಮ್ಮದಾವ? ಏಂ ವಿಶಿಷ್ಟ ?' ಒಟ್ಟಿನಲ್ಲಿ 'ನಾನೆ ಶಿಷ್ಟ !'
ಅಗೋ ವಿಶ್ವಾಮಿತ್ರ ಬಂದ ಬಾಯಲಿ 'ಗಾಯತ್ರಿ' ಎಂದ
'ಕಲಹ ಶ್ರೇಷ್ಠ ವರ್ಗವು
ಸಾಯುವದೇ ಸ್ವರ್ಗವು'—

'ಸಿಕ್ಕವರಿಗೆ ಶಿವಲಿಂಗ—ಕಳಕೊಂಡರೆ ಭವಭಂಗ
ಬೇಡ ಭವಿಯ ಸಂಗವು
ಸ್ವಾನುಭವವೆ ಲಿಂಗವು.'

'ನಾವು ಭವ್ಯ ದಿವ್ಯರು—ನಾವು ನವ್ಯಸೇವ್ಯರು'
ಪ್ರತಿಯೊಬ್ಬರು ಸೇರು-ಸೇರು
ಪ್ರತಿಪಕ್ಷಿಯು ಸವಾಸೇರು.

ದೇಶಬಿಟ್ಟು ದೇಶಗಳಿಗೆ—ವೇಷಹಾಕಿ ಬಂದರು
'ಬೇಕೆ ನಿಮಗೆ ಪಾಪರಕ್ಷೆ
ಇಲ್ಲಿದೆ ಆ ಮೋಕ್ಷ ನಕ್ಷೆ.'
ಗೋರಿಗಳಲಿ ರಾಜ್ಯಕಟ್ಟಿ—ಅದೆ ತಮ್ಮದೆಂದರು

ಕಲ್ಪವೃಕ್ಷ—ಕಲ್ಪತರು
ಬಂದವ ಹೋದವಗೆ ಗುರು
ತೊಂದರೆಯನೆ ತಂದರು
ಅದೇ ನ್ಯಾಯ ಎಂದರು

ನಮೂನ

ಬಾಳ ಹುರಿದು ತಿಂಪರು
ಶಾಸ್ತ್ರ ಶಸ್ತ್ರ ಕೂಡಿಬಂತು
ಮಹಾಮೋಕ್ಷ ತಂತ್ರವು
ಆಟಮ್ಮಿನ ಯಂತ್ರವು
ಎಷ್ಟೌಷಧಿ ಅಷ್ಟು ರೋಗ
ಗೊಬ್ಬರಕೂ ಉಪಯೋಗ
ಬುದ್ಧಿಯುಷ್ಟ ಬೆಳೆದಿದೆ

ಜೀವ-ಶಾಸ್ತ್ರಗಳೇ ಇಂದು
ಸಾವ—ದೀಕ್ಷೆ ಪಡೆದಿವೆ.
ಹಗಲು—ಪಂಜು ಹಿಡಿದಿವೆ.

ತಿಳಿಯದಿದರ ಮಾನಸ
ಬಲು ಬಲು ಬಲು ಛಾನಸ.
'ಮಾನಿಷಾದ' ಎಂದು ಹಿಂದೆ
ಕೂಗಿಕೊಂಡ ಮಾ—ಮುನಿ.
ಅದರ ಶಬ್ದ ಬದುಕಿದ್ದರು ಹೊಳೆಯದಾ 'ಗುಹಾ-ಧ್ವನಿ'
ವೀರ-ರೌದ್ರ ಶೋಕಾದ್ಭುತ
ಭಯವೇ ಬೀಭತ್ಸವು
ಉಳಿದ ರಸವು ತುಚ್ಛವು
ಮಹಾನುಭಾವ ಪುಚ್ಛವು.
ಶಾಂತ ಇಂದು ಭ್ರಾಂತಮನವ ಸಂತಯಿಸುವ ಶಬ್ದವು
ಇಲ್ಲಿದೆ ಪ್ರಾರಬ್ಧವು
'ನಮ್ಮತವೇ ಒಮ್ಮತವು ; ನಿಮ್ಮತಿಗೂ ಸಮ್ಮತಿ
ಮಧ್ಯ ಮಾರ್ಗವೇ ಗತಿ !'
ಮಧ್ಯ ಏಸಿಯಾಖಂಡದಲ್ಲಿ
ಬೆಂಕಿ ಬಿದ್ದ ಸಂಗತಿ—

## ನಮನ

ಮನೆಯ ಬೆಂಕಿ ಮನವ ಸುಡದೆ
ಎಂದೆಂದೂ ಮಾಣದು
ತನ್ನ ಕೊನೆಯ ಕಾಣದು.

ಅಹಂ-ಗಂಡ! ಯಾವ ಕಂಡ ?
ಸಾವೆ ಅದಕೆ ಮೋಕ್ಷವು
ಶೂನ್ಯ ಕೊನೆಯ ಪಕ್ಷವು.

ಭೂಮಿಯಲ್ಲಿ ದುಃಖ ಬಿತ್ತಿ
ಸ್ವಾಮಿಯಾಗಬಲ್ಲರೇ ?
ಸಲ್ಲಿಸಿದಲಿ ಸಲ್ಲರೇ ?

ಬ್ರಹ್ಮವೃಕ್ಷ — ಸದಾಧ್ಯಕ್ಷ
ಬೇಕನಂತ ಸಾಕ್ಷವು
ಆನಂದದ ವಿಜ್ಞಾನವು
ಭೂಮಿಯೊಳು ಅಬಾಧ್ಯವು
ಭೌಮಾತ್ಮವು ಸಾಧ್ಯವು.

## ೩೪. ತವಕ

ಯಾವುದೊ ರಸಾತಳವು ಏಕೊ ಹಸಿದಂತೆ
ಕಿಂವದಂತಿಯು ಕವಡಿ ಹಲ್ಲು ಕಿಸಿದಂತೆ
ಅಂತಕತೆ ಇಂತಕತೆ ದಂತಕತೆಯಂತೆ
ಗತಸ್ಮರಣೆಯ ಒಂದು ಕವುದಿ ಕಂತೆ.

ಹಿಂದೇನು ? ಮುಂದೇನು ? ಏನೊ ಚಿಂತೆ !
'ಕಾಂತಾರದಧಿ ದೇವಿ' ಸೀತೆಯಂತೆ
ಭೋರ್ಗರೆವ ಗಾಳಿಯಲಿ ಮಂತ್ರ ಬರೆದಂತೆ
ಭಾವನೆಯ ಬಯಲಲ್ಲಿ ಕವನ ಬರೆದಂತೆ
ಕಲ್ಪನೆಯ ಜಲದಲ್ಲಿ ಚಿತ್ರ ಕೊರೆದಂತೆ
ಬೆಂಕಿ-ಬಸಿರಲಿ ಬೆರೆತ ಎರಕದಂತೆ.

ನರಕ-ಗರ್ಭದೊಳಿದ್ದ ಸ್ವರ್ಗದಂತೆ
ಬಂಧನವನಪ್ಪಿದಪವರ್ಗದಂತೆ
ಜೀವ-ಕಾವ್ಯದ ಕೊನೆಯ ಸರ್ಗದಂತೆ
ಯಾವ ದೈವವೊ ಹಿಮಾಲಯವು ಆದಂತೆ
ತಣ್ಣಗಾಗಿಹುದೇನೊ ಕಾದು ನಿಂತೆ.

ಎದೆಯ ತಬಕದಲಿ
ಸುಮನಸ್ತಬಕ
ಎತ್ತಿದೆ ಉಜ್ವಲ ಜ್ವಾಲೆ
ತಕಪಕ ತಕಪಕ
ಕುಣಿವುದು ತವಕ
ಮೇಲಿದೆ ಕರುಣಾಮಾಲೆ.

## ೩೫. ಹಿರಣ್ಯಗರ್ಭನಿಗೆ ಪ್ರಾರ್ಥನೆ

ಈಶ್ವರನನೆ ನೋಡುತಿಹೆ
ನಶ್ವರವನು ಕಾಣುತಿಹೆ—ಓ ಹಿರಣ್ಯಗರ್ಭ !
ಯದ್ದೃಷ್ಟಂ ತನ್ನಷ್ಟಂ
ಹಾ ಕಷ್ಟಂ ಹಾ ಕಷ್ಟಂ—ಸೃಷ್ಟಿಯ ಸಂದರ್ಭ

ದೃಷ್ಟಿ ದೃಷ್ಟ ದರ್ಶನ
ಇದು ಜೀವಾಕರ್ಷಣ—ಹೇ ಮುಮೂರ್ಷು ಚಿಂತನ !
ಇಲ್ಲದುದನೆ ಅಪ್ಪಿಕೊಂಡು
ಇದ್ದಂತೆಯೆ ಒಪ್ಪಿಕೊಂಡು ಎನುವೆ ಅದೆ ಚಿರಂತನ.

ತಪ್ಪಿ ಬಂದೆ ಭೂಲೋಕಕೆ
ನರಕವೆಂದೆ ನಾಕಕೆ—ಸಿಕ್ಕೆ ಇಂದ್ರಜಾಲಕೆ.
ಶಬ್ದಗಳನು ಪೀಡಿಸುತ್ತ
ಮೌನವನ್ನೆ ಏಡಿಸುತ್ತ-ಜೋತಿರುವೆಯೊ ಬಾಲಕೆ.

ನಿನ್ನ ದುಃಖ ಹಂಚುತಿರುವೆ
ಕ್ಷಣಿಕವಾಗಿ ಮಿಂಚುತಿರುವೆ—ಶೂನ್ಯ ನಿನ್ನ ಪಟ್ಟಣ.
ಬೀಜ ಎಂದೊ ನಾಶವಾಗಿ
ಬವಣಿ ಸಾವಕಾಶವಾಗಿ—ತವುಡಾಯಿತು ಕೊಟ್ಟಣ.

ಓ ಹಿರಣ್ಯಗರ್ಭ ಬಾರ
ಜೀವನದೊಳಿ ಇಲ್ಲ ಸಾರ—ನೀನಿಲ್ಲದ ಮೇಲೆ
ನಿನಗಾಗಿಯೆ ಹೊತ್ತಿಹದಿಗೊ
ನಿನ್ನೆಡೆ ತಲೆ ಎತ್ತಿಹದಿಗೊ—ಆಕೂತಿಯ ಜ್ವಾಲೆ.

ಅಸ್ಥಿರದಲಿ ನೀನೇ ಸ್ಥಿರ
ಪ್ರಳಯದಲ್ಲು ನಿನ್ನ ಸ್ವರ—ನವವೇದವ ಹಾಡಿ
ಮತ್ಸ್ಯನಂತೆ ಉದ್ಧಾರಕ

## ನಮನ

ಸಿತವರಾಹನೊಲು ತಾರಕ—ಆಗಲಿ ಕಾಪಾಡಿ

ಓ ಅಧಿಕನೆ ಧ್ಯೇಯಿಯೇ
ದೇಹದಲಿ ವಿದೇಹಿಯೇ—ಮೂಡಲಿ ಹೊಸ ಗಾಡಿ
ನಗವಾಗಲಿ, ಖಗವಾಗಲಿ ಈ ಜೀವನ ಪಾವಕ
ಅಘನಾಶಕ ತಾನನಂಗ ಶಿವ-ಶಕ್ತಿಯ ಜೀವಕ.

# ೩೬. ಇದು ವಾರ್ಷಿಕ ವರದಿ

ಇದು ವಾರ್ಷಿಕ ವರದಿ !
ಇನ್ನಾರದು ಸರದಿ ?
ಮತ ಮತಗಳ ಕೋಲಾಹಲ ಹಾಲಾಹಲ ಗರದಿ

ಕಟ್ಟಿದ್ದನೆ ಒಡೆಯುವರು
ಓಡಿಸುವರು ಹಿಡಿಯುವರು
'ಥೂ' ಬಿಡುವರು, 'ಥೂ' ಎನುವರು
ಇದು ಜೀವದ ಬ್ಯಾಟಿ
ನಡೆದಿದೆ ಉಪರಾಟಿ.

ಬೇಕಿಲ್ಲವು ಈ ರಾಟಿಗೆ
ಹಾಡಿನ ಹೊಸ ಧಾಟಿ
ತಿರುತಿರುಗಿಯು ಅದೆ ನೂಲು
ಹಿಂದಿನಗಿಂತಲು ಏನೋ
ಇಂದಿಗೆ ಕುಸು ಮೇಲು

ಅದೆ ಕೈಯು, ಅದೆ ಗತ್ತು
ಬದಲಾಗಿರಬಹುದೇನೋ
ಬೆರಿಕೆಯ ಹಿಕಮತ್ತು
ಅದೆ ಖದ್ದರು, ಅದೆ ಚದ್ದರು
ಬಣ್ಣವು ಬದಲಾಗಿದ್ದರು.
ಅದೆ ಹೊಳವೂ ಸುಳಿವು
ಗೆರೆ, ಗೆರೆ ಬೆರೆಯುವ ಸಂದಿಗೆ
ಏನೇನೋ ಸಂಚು
ಅದರಂತೆಯೆ ಅಂಚು

೭ಪುನ

ಜಡಿ ಗುಡ್ಡಿನ ಗಾಡಿ
ತುಂಬಿರು ಹೊಸರಾಡಿ

ಕಂಬದ ಹಾಗೆಯೆ ನಿಂತಿದೆ
ಬೀಳುವ ಕೈ ಕೊಡೆ
ಚ್ರಿಕ್ಕಿನ ಕೀಲವೆ ತಪ್ಪಿದೆ
ಎಷ್ಟಾದರೂ ನೋಡೆ

ಕಂಪಾಗಿವೆ ಲ್ಯಾಂಪುಗಳು
ಸೊಂಪಾಗಿವೆ ನಿದ್ರೆ
ಬಾಳಿರು ಬದುಕಿದ್ರೆ
ಇದು ವಾರ್ಷಿಕ ವರದಿ.

## ೩೭. ಅಪ್ರೆಕ್ರಿ—ಮಾ

ಮಹಾ ಕಾಯೆ—ಮಹಾ ಪ್ರಾಯೆ
ತಾಯಿಯಾಗಿ ಬರುವೆ ಒಮ್ಮೆ
ಮಾಯಿಯಾಗಿ ಬರುವೆ
ಯಾರು ನೀನು ಇರುವೆ ?

ಓ ನನ್ನ ಗುರುವೆ
ನಾನು ಲಘುವೆ
ಎನಲು ನಗುವೆ
ಎದೆಯ ಬಗೆದು ಹೊಗುವೆ
ನಿನಗೆ ಕೈಯ ಮುಗಿವೆ.

ನಿನ್ನ ತೊಡೆಯ ತೊಟ್ಟಿಲಾ
ಎದೆಯ ಹಾಲು ಬಟ್ಟಲಾ
ತುಟಿಯು ಮೇಲು ಮೆಟ್ಟಲಾ

ಕಣ್ಣೊಳಿತ್ತು ಜ್ವಾಲಾಮುಖಿ
ಅಲ್ಲಿ ಆದೆ ನಾನು ಸುಖಿ
ತಲೆಗೇರಿದೆ ಮತ್ತಿನಂತೆ
ಮುಳುಗಿದೆ ಸಾ ಮುತ್ತಿನಂತೆ
ಹೊನ್ನ-ಹೆಣ್ಣು-ಮಣ್ಣು-ಕಣ್ಣಿ
ದಾವಣಿಗಿದೆ ಜೀವನಾ
ಹತ್ತು ದುಂಬಿದೊಂಬಿ ಹೊಲವು
ಜೀವನರಾಜೀವನಾ.

ಲೀಲೆ ಎನಲೊ ಮಾಲೆಯೆನಲೊ ನಿನ್ನಪ್ಪುಗೆ ತೋರಣಾ
ನಿನ್ನ ಬಸಿರ ಬಯಲೆಯಾಯ್ತು ನನ್ನ ಭವದ ಕಾರಣಾ.

## ನಮನ

ತಾಯಿಯಾಗಿ ಹಡೆದು ನೀನು
ಒಪ್ಪಿಸುವರೆ ಮಾಯಿಗೆ
ನಿನ್ನ ಹಣ್ಣನುಂಡು ನಾನು
ಬಯಸಬೇಕೆ ಕಾಯಿಗೆ ?
ಹುಲಿಯ ಹಾಲನುಣಿಸಿ ನನಗೆ
ಬೆದರಿಸುವೆಯಾ ನಾಯಿಗೆ ?
ತಪ್ಪು ಬಂತು ಬಾಯಿಗೆ !
ಉಂಡ ಮನೆಗೆ ಎರಡನೆಣಿಸಲಾರೆ ನಾನು ತಾಯಿಗೆ.

ಏನು ಎನುವೆ ಮಾಯೆ
ನೀನೆ ನನ್ನ ಕಾಯೆ
ಮೌನಿಯಾಗಿ ಬರುವೆ ಒಮ್ಮೆ। ಬಾಯಿಯಾಗಿ ಇರುವೆ
ಬೇರೆ ಭಾವ—ತರುವೆ । ಓ ಅರವು ಮರವೆ !

ಸುಳಿವ ಗಾಳಿ ಮೈಯ ತಾಳಿ ಉಲಿವುದೇನೊ ಮಂತ್ರ
ನೇಸರಿಸೆದ ಈ ನಿಸರ್ಗ ತೆರೆ ತೆರೆದೊಲು ಯಂತ್ರ
ಕನಸಿಗೊಂದು ಕಣಸಿಗೊಂದು
ಮನಸಿಗೊಂದು ತಂತ್ರ
ಹೇಗೆ ನಾ ಸ್ವತಂತ್ರ ?
ನಿನ್ನ ಹೃದಯದಾವರ್ತದಿ
ಮೂಡಿಸುತ್ತ ಮುಳುಗಿಸಿ
ವಾಸನೆಗಳ ತೊಳೆದು ಕಳೆದು
ಸಂಸ್ಕಾರವ ಬೆಳಗಿಸಿ.
ಓಂಕಾರವ ಮೊಳಗಿಸಿ

ಉನ್ನತಿಗೆ ಕಳಿಸುವೆ
ಸತ್ತ್ವವನ್ನು ಉಳಿಸುವೆ
ನಿನ್ನ ಸ್ನೇಹ ಗಳಿಸುವೆ

ನವಃನ

ತಾ ಎನಲಿ ? ತಾಯಿ !
ಬಾ ಎನಲು ಬಾಯಿ ?
ಏನೊ ತಂದೆ ಸಾಕು ಎಂದೆ
ಬೀಜದಲ್ಲೆ ಸೋಜಿಗ
ಜಗಜಗದಲಿ ನವಜಗ.
ಅಷ್ಟಪ್ರಕೃತಿ ಕಷ್ಟವಲ್ಲ । ಬದಲಿಸುವದೆ ಇಷ್ಟವು
ಕೃಪಾನೇತ್ರದಿಂದ ಪೂರ್ವಕರ್ಮಸೂತ್ರ ಬಿಡಿಸಿದೆ
ದೇವಮಾರ್ಗ ಹಿಡಿಸಿದೆ.

ಓ ಮಾಯಿ ಓ ತಾಯಿ
ಶಕ್ತಿಬಂಧದಲ್ಲಿ ಕಂಡೆ ಶಿವ-ಭಕ್ತಿಯ ಅಂಜನು
ಜನ್ಮ-ಮರಣ-ಸರಣಿಯಲ್ಲಿ ಏನೋ ಒಳಸಂಚನು.

ಶೂನ್ಯದಲ್ಲಿ ತುಂಬಿಬಂತು
ಪೂರ್ಣದೊಂದು ಕಂದವು
ಸತ್ತು ಚಿತ್ತುಗಳಲಿ ಹಿಗ್ಗಿ
ಹರುವಿದ ಆನಂದವು.
ಬ್ರಹ್ಮಜಾಯಿ, ನಾನು ಸಾಯಿ ನಿನ್ನ ಅಂಶ ಅಮರವು
ಭ್ರಮಣ ಬವಣೆ ನಿನಗೆ ಹವಣೆ ಲೀನವಾಯ್ತು ಭ್ರಮರವು
ಮುಗಿಯಿತು ಹಳೆ ಸಮರವು

ಬಂತು ವರ್ಷ—ಘನದ ಹರ್ಷ
ಕೇಕಿಸಿತ್ತು ಶ್ರಾವಣಾ
ಭೇಕಿಸಿದರು ಕೆಸರು ಕೆರೆ
ಬನ ಬನದೊಳು ಬೇರಿ ತೆರಿ
ಆಷಾಢದ ಮಾವಣಾ

## ನಮನ

ಅಮೃತ ಉಂಡ ಜೀವನಾ
ಬಾಳತಾಯಿ ಪಾವನಾ
ವೀರಭೋಜ್ಯ ಜೀವನಾ

ಮಾತೆ ತಂದ ಭೋಜನ
ಪಂಚ-ಪಂಚ-ಯೋಜನ
ಮಾಯೆ ಮೂಲ ಮಾತೃಕೆ
ಜೀವದ ಹಲ ಪಾತ್ರಕೆ
ವಿಜ್ಞಾನದ ಸಂಜ್ಞಾನಕೆ ಸುಫಲಿಸಿತ್ತು ಸತ್ತ್ವವು
ಗರ್ಭಿಸಿರುವ ತತ್ತ್ವವು
ಪ್ರಜ್ಞಾನ ಮಹತ್ತ್ವವು.

ಶ್ರವಣದಲ್ಲಿ ಶ್ರಾವ್ಯವಾಗಿ ಧ್ವನಿಸಿತು ನವಕಾವ್ಯವು
ಪ್ರತಿಮೆಯಲ್ಲಿ ಪ್ರತಿಭೆ ಕಂಡ ರಸಿಕ ಹೃದಯ ಭಾವ್ಯವು.



## ೩೮. ಸುಪ್ರಭಾತೇ

ಆವರ್ಣನೀಯಂ ಮೌನೇ ಗ್ರಾಹ್ಯಮ್
ಭಾವೇ ಗಮ್ಯಂ ಹೃದಯೇ ಧ್ವನಿತಮ್
ಹತಂ ಹತಂ ಯದಿ ವಾಚ್ಯಮವಾಚ್ಯಮ್
ಸುರತಟಿನೀವ ಚ ಶಿರಸಿ ವಿಧಾರ್ಯಮ್.

ಆಸ್ವಾದಿತಂ ಕಿಂ ಸತ್ ಚಿತ್ ಸುಖದಮ್
ಶಾಂತಮತೀತಂ ಉತ್ತರೋತ್ತರಮ್
ಉನ್ಮೀಲಿತಮಿವ ಅಂತರ್ನೇತ್ರಮ್
ಅವತಾರಿತಮಿವ ವಿಶ್ವೋದ್ಧಾರ್ಯಮ್.

ಹಿರಣ್ಯಗರ್ಭಂ ಮಧುಸಂದರ್ಭಮ್
ಅನಿಮಿತ್ತಂ ಬತ ಮಾತೃಕೃಪೇವ
ಸದೇವ ಸದೇವ ಕೇವಲಮೇವತ್
ಪಿಂಡೇ ರೂಪಿತಮಿದಮನಿವಾರ್ಯಮ್.

ನಾಟ್ಯಗೃಹಂ ತತ್ ಭಾರತರೂಪಮ್
ಪ್ರೇಕ್ಷಕಸಾಕ್ಷಿಕನಾಟಕದೀಪಮ್
ಉತ್ತರಣೀಯಂ ಆರ್ಯಂ, ಆರ್ಯಮ್
ಸ್ವಾಂಗೇ ಲಿಂಗೇ ಧರ್ಮಂ ಧಾರ್ಯಮ್.

ನಟರಾಜೇ ಯತ್ ದೃಷ್ಟಮಪೂರ್ವಮ್
ಲೀಲಾಯಿತಮಿದಮದೃಷ್ಟಪೂರ್ವಮ್
ಪಂಚಮುಖೇ ಯತ್ ಪ್ರಪಂಚಾಯಿತಮ್
ನರನಾರೀಗುಣದಂಪತಿಕಾರ್ಯಮ್.

ಉಪರ್ಯುಪರಿ ಸಂಭೂತಂ ಪ್ರೀತಮ್
ಕಾರಣಕ್ಷೇತ್ರೇ ಭಗವದ್ಗೀತಮ್
ಕರಣೇ ಪರಿಣಮಿತಂ ವ್ಯತಿರಹಿತಮ್
ಶಿವಶಕ್ತ್ಯಾ ಕೃತಸಹಜಂ ಸಹಿತಮ್.

## ೩೯. ಸುಮುಖ

ಸುಮುಖನಾಗಿ ಬಾ । ಗೆಳೆಯ । ದುರ್ಮುಖಾ
ಮನ್ಮಥನಿಗೆ ಸನ್ಮುಖಾ !
ಬಾ ಸದೈವ ಹಸನ್ಮುಖಾ !

ನೆರೆಹೊರೆಯ ಜನ ಕರಿಕರಿಯ ಭರ-
ದಿಂದ ಎಷ್ಟೊ ನೊಂದರೂ
ಥಾಯಿಯಿಟ್ಟೋ ಬಾಯಿ ಬಿಟ್ಟೋ
ಏನೊ ವಕ್ರಿಸಿ ಅಂದರೂ

ಹೋಳಿಹುಣ್ಣಿವೆ ಆಗಿಹೋಗಿದೆ
ದವನಹುಣ್ಣಿವೆ ಬರಲಿದೆ,
ಹಂಪೆ ತೇಂಗಿಗೆ ಹಗ್ಗ ಹೊಸೆದಿದೆ
ಕಾಯಿ ಕಪ್ಪುರ ತರಲಿದೆ.

ಏನೆ ತಾಂಡವ ನಡೆದರೂ ಜತೆ
ಜತೆಗೆ ಸುಳಿವುದು ಲಾಸ್ಯವು
ಭವ್ಯ ಗೌರವದೆದೆಯ ತುಂಬುವ
ಸತಿಯ ಹೃದಯದ ಹಾಸ್ಯವು
ಶಿವಕೆ ಶಕಿಯ [illegible]ಸ್ಯವು.

# ೪೦. ಸ್ಮರಣ—ತರಂಗಿಣಿ

ಚಿತ್ತಭಿತ್ತಿಯೊಳು ಸ್ಮರಣ ತರಂಗಿಣಿ
ಸಂತತ ಹರಿಯುವಳು.

ಮೈದೋರುವಳು । ಮೈಗರೆಯುವಳು
ಎತ್ತಣಿಸೆತ್ತೋ ಹರಿದೆ ಹರಿಯುವಳು
ಬಯಲಲಿ ಮೆರೆಯುವಳು.

ಎಲ್ಲಿದೆ ಉಗಮ । ಯಾವುದೊ ಸಂಗಮ
ಪದರು ಪದರಿನಲಿ ಏನೋ ಅದುರನು
ತೆರೆ ತೆರೆ ತೆರೆಯುವಳು.

ಕ್ಷಣ ನೋಡುವಳು । ಕ್ಷಣ ಹಾಡುವಳು
ಪಳಕು ಪಳಕುಗಳ ಚಿತ್ರವಿಚಿತ್ರವ
ಕ್ಷಣದಲಿ ಬರೆಯುವಳು.

ಎಲ್ಲೊ ಬೆರೆಯುವಳು । ಯಾಕೊ ಮರೆಯುವಳು
ಅದ್ಭುತಗಳನೊ ಬುದ್ಬುದಗಳೊ ಎನೆ
ಪಟ್ಟನೆ ಒಡೆಯುವಳು.

ಸ್ವರ ಹಿಡಿಯುವಳು । ಸ್ವರ ಬಿಡಿಯುವಳು
ಬಿಂಬವನ್ನೆ ಪ್ರತಿಬಿಂಬಿಸಿದಂತೆಯೆ
ನನ್ನನೆ ಕೊರೆಯುವಳು
ನನ್ನಲಿ ಕೊರೆಯುವಳು
ನನ್ನಾಳೆ ದೊರೆಯುವಳು.

## ನಮನ

ಮರಣವಿಲ್ಲದೀ ಸ್ಮರಣ ತರಂಗಿಣಿ
ಸುಪ್ತ ಸರಸ್ವತಿಯಾಗಿಹಳು
ಉದ್ಭವಲಿಂಗದ ಹಾಗಿಹಳು
ಕಾರಣ— ನದಿಯಿದು
ಬಗೆ ತಳಹದಿಯಿದು

ಚಿತ್ತಭಿತ್ತಿಯೊಳು ಚಿತ್ರವ ಬರೆದೊಲು
ನಿಮ್ನೋನ್ನತಿಯಲಿ ತಿರುಗುತಿದೆ
ನೆನೆ ನೆನೆದಂತೆಯೆ ಕರಗುತಿದೆ
ಈ ನಿಬ್ಬೆರಗಿಗು ಸೆರಗು ಇದೆ.

# ೪೧. ಓಲೆ

ಓಲೆಕಾರನ ಬರುವ ದಿನವು ಕಾಯುವರೆಷ್ಟೊ
ಓಲೆಗಳಲಿಹುವೇನು ದಿನದ ಲೆಕ್ಕ
ಸಂಜೆ ಬಿಸಲೊಲು—ಸಪ್ಪಗಾಗಿ ಹೋಗುವ ಸುಖವು
ಕಿಡಿಬೆಂಕಿಯೊಲು ಕಡೆಗು ಸುಡುವ ದುಃಖ.

ಸುಗ್ಗಿ ಮಳೆ ಚಳಿಗಾಲ ತಿರುಗಿ ಒಂದನ್ನೊಂದು
ಬೇಟೆಯೊಲು ಬೆನ್ನಟ್ಟಿ ಬರುತಲಿಹುದು
ಹಳೆಯ ಸುಖದುಃಖಗಳೆ ಹೊಸದಾಗಿ ತೋರುವವು
ಈ ಘಟೋತ್ಕಚ ಸಂತೆ ನೆರೆಯುತಿಹುದು.

ಚಿಕ್ಕೆಗಳ ಅಕ್ಕರದ ಮಾಲೆ ಮಾಲೆಗಳು
ಮುಗಿಲಲ್ಲಿ ಬರುತಿಹವು ಓಲೆ ಓಲೆಗಳು
ಈ ಮನೋರಾಜ್ಯದಲಿ ಓದಲುಸಿರಿಲ್ಲ
ನಿಟ್ಟುಸಿರು ಬಿಡಲು ದಿನವೂ ವೆಚ್ಚವೆಲ್ಲ.

## ೪೨. ಸಾಮ್ರಾಜ್ಯದ ಹೊತ್ತು

ಅಂದಿಂದು ಮುಂದೆಂದು ಮೂರು ಮುಖದಲಿ ಮೂರು
ಮೈಗೆ ಮೋಹವಾಗಿ ನಿಂತಿತ್ತು ಹೊತ್ತು
ಇಟ್ಟಡಿಯ ಶಕ್ತಿ ಮೋಹಕ್ತಿ ಇಕ್ಕಡಿ ನಡೆದು
ಮೂರು ಕಲಿಗಳನು ಮುಟ್ಟಿತ್ತು ಚಿತ್ತು.

ನಿನ್ನೆ ನೆನೆನೆನೆಸಾಗಿ ಕುಸುರಿನೆಸದಂತಿಹುದು
ಈ ಹೊತ್ತು ಫಲದುಮಲರಾಯ್ತು ಮನಸು
ಕಲ್ಪವೃಕ್ಷದ ಬಳಿಗೆ ಹಾಕಿನಲಿ ಬೆಳೆಯುತಿದೆ
ಕಣ್ಣು ಕೋಟಿಕಂಬಗಳ ಕನಸು.

ವಾಸಕ್ಕೆ ಮನೆಯಂತೆ ಇಂದು ಸಾಕು
ಹಿಂದು ಹಿತ್ತಲಿನಂತೆ ಒಗ್ಗಬೇಕು
ಆಸೆಗಳ ಹೂಬಳ್ಳಿಯಾಟಕಂಗಳವು
ಅಲ್ಲಿ ನೆಲಿಸಲಿ ನಮ್ಮ ಸಕಲ ಮಂಗಳವು.

## ೪೩. ಗೂಢ

ನಲ್ಲರಿಳೆನಗೆ-ನೋಟ, ಬಲ್ಲವರ ಒಡನಾಟ, ಬಲ್ಲಿದರ ಬಲದ ಆಟ
ಚೆಲ್ಲಾಟದೊಳು ಚಿಟ್ಟಿಚೀರಾಡಿ ಹಾರಾಡಿ ನಗುವಂಥ ಚಿನ್ನರಾಟ.

ಮುಂಜಾವು ಮುಗಿಲು, ಜಗಕೆಲ್ಲ ಎಚ್ಚರ ತರುವ
ಜನಜಾತ್ರೆಯಾದ ಹಗಲು
ಸಂಜೆ ಸಂತಸ ಮತ್ತೆ ಕತ್ತಲೆಯ ಕರಗಿಸುವ ನಗೆಯನ್ನು ಚಂದ್ರ ನಗಲು
ಆಗುವಂತಹ ಸೊಗವು ಅರಳರಳಿ ಕ್ಷಣ ಕ್ಷಣಕೆ ಮರಮರಳಿ
ಮುಗಿದ ಮೊಗವು
ಸಾಗದೇ ಸಾಗಿರುವ ಮಾಟಮಾಡುವ ಕಾಲವೆಂಬ ಹೊಂಬಣ್ಣ ಮೃಗವು

ಸುತ್ತೆಲ್ಲ ಸೂರಿ ಇರೆ ವರಸಾರ್ವಭೌಮನಾ ಸಂಪತ್ತು ; ಮೂಢತನಕೆ
ಎತ್ತೆತ್ತ ನೋಡಿದರು ಸತ್ತವರ ಮನೆಯಂತೆ ಏಕೆಯೆನಿಸುವದೊ ಮನಕೆ ?

## ೪೪. ತಿರುಕ

ಹೊತ್ತೇರಿ ಇಳಿವವರಿಗು
ಎತ್ತಿತ್ತು ಬಿಸಿಲೆ ಇತ್ತು ॥
ಶಿವನ ಹಣೆಗಣ್ಣಿನಂತೆ
ಹೊತ್ತು ಸುಡು ಸುಡುತಲಿತ್ತು ॥

ಹುಲ್ಲ ಕಸಿಕರಡ ಕರಿಗು
ನೆಳಲಾಸೆ ಕೂಡ ಕೊಡಲು ॥
ಮೋಡ ಬಿಳಿದಾದದೊಂದು
ತೋರದಿದೆ ಮುಗಿಲ ಒಡಲು ॥

ಆರ್ನವಿದರಾರ್ಗೆ ಚಿಂತೆ ?
ಸುಗ್ಗಿ ಬನ ಹಸುರುಗೆಂಪು ॥
ಹೊತ್ತಿರಿದು ಹೊತ್ತೇರೀಸು ?
ಪಾನಕದಲಿತ್ತು ತಂಪು ॥

ಹೊಳೆ ಸೊರಗಿ ಹಳ್ಳವಾಗೆ
ನೀರಡಿಸಿತೆಂದು ಕಡಲು ॥
ತಣ್ಣುಸುಕೂ ತಪಿಸುತಿತ್ತು
ಎಲ್ಲೊ ನೀರ್ದುಂಬುತಿತ್ತು ॥

ಅಗೊ ಊರ ದೂರದಲ್ಲಿ
ಗುಡಿಸಲದ ಮೂಗಿನಲ್ಲಿ ॥
ಅಲೆವ ಗರಿ ಕಡ್ಡಿಯೊಡನೆ
ಹೋಲುವೊಲು ನಿಂತ ತಿರುಕ ॥

## ನಮನ

ಕರುಳಿಲ್ಲದವರ ಕಂಡು
ಕೆಂಡಗೊಳದಿರಲಿ ಎಂದು ॥
ಕಣ್ಮುಚ್ಚಿಕೊಂಡು ಹೊರಟೆ
ಊರ ಹೊರಗೆಂದು ತಿರುಕ ॥

ಬೇಡಿಕೆಯ ದೀನ ದನಿಗೆ
ನೀಡುವರ ನುಡಿಯು ಬರದೆ ॥
ನಾಚಿ ಸತ್ತೀತು ಎಂದು
ಅದನಡಗಿಸಿಟ್ಟ ಒಳಗೆ ॥

ದೊಡ್ಡ ಹರಿವಾಣ ನೋಡಿ
ಹುಟ್ಟೀತು ಅಡ್ಡ ನಗೆಯು ॥
ಎಂದೊಡಕ ಮಡಿಕೆ ತುಣುಕ
ಹಿಡಿದಂದು ಹೊರಟ ತಿರುಕ ॥

ಕಣ್ಣಿದ್ದು ಕುರುಡನಾದ
ಹಸಿವಿದ್ದು ಮೂಕನಾದ

## ೪೫. ಹುಟ್ಟಿನ ಗುಟ್ಟು

ತ್ಯಾಗವೆ ಜೀವದ ಕರ್ಮಾ
ಭೋಗವೆ ಜೀವನ ಧರ್ಮಾ
ಯೋಗವೆ ಶಿವಜೀವರುಗಳ ಬಾಳಿನ ಮರ್ಮಾ.
ಹರ ಓಂ ಹರಿ ಓಂ ಹರಿಹರ ಓಂ ಬ್ರಹ್ಮಾ

ನಾನು ತಾನು ಈ ಹಮ್ಮಾ
ಇದು ಅಣ್ಣಾ ಅದು ತಮ್ಮಾ
ಅವಳಿ ಜವಳಿ ಸಂಬಂಧವು ಇದೆ ಸಮ್ಮಾ ನಿಮ್ಮಾ.
ಹರ ಓಂ ಹರಿ ಓಂ ಹರಿಹರ ಓಂ ಬ್ರಹ್ಮಾ

ಪಡೆದವನೊ ಗುರುಗುಮ್ಮಾ
ಹಡೆದವಳಾವಳೊ ಅಮ್ಮಾ
ಹುಟ್ಟಿನ ಗುಟ್ಟನು ಹೇಳಲು ಕೇಳಲು ಇರು ಸುಮ್ಮಾ,
ಹರ ಓಂ ಹರಿ ಓಂ ಹರಿಹರ ಓಂ ಬ್ರಹ್ಮಾ.

## ೪೬. ಬಾಳ—ಪ್ರೇಮಿ (ಅಣ್ಣ-ತಂಗಿ)

ಆರು ತಿಂಗಳ ಕೂಸು ಪ್ರೇಮಿ ಕಣ್ಮುಚ್ಚಿದಳು
ಬಾಳನಿಗೆ ಸುಖವಿಲ್ಲ ಆಕೆಯಿರದೆ
" ನಿದ್ದೆ ಹೋದವಳನ್ನು ವೈದ್ಯರಲಿ ಒಯ್ದಿರಾ ?
ಎದ್ದಿಲ್ಲವೇ ಕೂಸು ಇನ್ನು ಬರದೇ ? "

ಎಂದು ಎನ್ನುವನಾತ ಎರಡು ವರ್ಷಗಳಾಗಿ
ನಮಗೆ ಪ್ರೇಮಿಯು ಈಗ ನಾಮರೂಪ.
"ನನ್ನೆತ್ತರಾಗಿಹಳೊ, ನಿನ್ನೆತ್ತರೋ ? " ಎನುವ
ಬಾಳನಿಗೆ ಆಕೆ ಜೀವತ್ ಸ್ವರೂಪ.

ಯಾ ಕೂಸ ಕಂಡರೂ ಅವಗೆ ಪ್ರೇಮಿಯ ನೆನಪು—
ನಗೆ, ನೋಟ, ಆಟ, ಅಳು, ನಿದ್ದೆ, ಮುತ್ತು,
ಗಲ್ಲ, ತುಟಿ, ಗದ್ದ, ಹಣೆ, ಮೂಗು, ಕಣ್, ಕುರುಳು, ಬೆರ-
ಳೇನೆ ಮುಟ್ಟಲಿ ಅವಗೆ ಪ್ರೇಮಿ ಮುದ್ದು.

" ಅವಳಿಗುಣಿಸುವರಾರು? ಅವಳು ಕುಡಿಯುವದೇನು?
ಅವಳಾರ ಕೂಡ ಆಡುವಳು ? ಹೇಳು,
ಅವಳು ತಪ್ಪಡಿಯಿಟ್ಟು, ತೊದಲಾಡುತಿರುವಳೋ
ಪಾಪಾ, ಮಾಮಾಃ ಎಂದು ? ಅಣ್ಣ ಕೇಳು "

ಈ ಮರುಳು ಹಿಡಿದೆಲ್ಲಿ ಬಾಳ ಹುಚ್ಚಾಗುವನೊ
ಎಂದು ಒಮ್ಮೊಮ್ಮೆ ನಮಗಾಯ್ತು ಚಿಂತೆ.
ಭ್ರಾಂತಿ ನಮಗೇ ಇಹುದೊ? ಅಹುದು ಅವನೇ ಜಾಣ,
ನಾವೇಕೆ ಆಗೆವೋ ಬಾಳನಂತೆ ?

## ನಮನ

ಆ ಕೂಸು ನರಳಿದ್ದು, ಆ ಕೂಸು ಅತ್ತಿದ್ದು,
ಎಂದೇನೊ ನಕ್ಕಿದ್ದು, ನೆನಪು ನಮಗೆ ;
ಕೊನೆಗೆ ಕಣ್ಮುಚ್ಚಿ ಕಣ್ಮರೆಗಾಗಿ ಹೋಗಿದ್ದು
ಕಣ್ಣೀರ ಬಿಟ್ಟು ಕೊಟ್ಟಿದ್ದು ಯಮಗೆ !

ಈ ದುಃಖ ತೆರೆಯಾಗಿ ಜೀವ ಮರೆಯಾಗಿತ್ತು
ಬಾಳನಿಗೆ ಮಾತ್ರ ಅದು ನಿತ್ಯ ಜೀವ.
ಮೈಯೊಡನೆ ಒಲಿಯುವದು ನಿತ್ಯ ನಮ್ಮಯ ಜೀವ
ನಮಗೆಂತು ಸಹಜ ಬಾಲಸ್ವಭಾವ ?

ನಿದ್ದೆಯಲ್ಲೇಳುವನು, " ಪ್ರೇಮಿ ಬಂದಳೆ ? " ಎಂದು,
ಕನಸಿನಲಿ ಕೇಳುವನು " ಪ್ರೇಮಿಯೆಲ್ಲಿ ? "
ಉಣುವಲ್ಲಿ, ಉಡುವಲ್ಲಿ, ಅವಗೆ ಪ್ರೇಮಿಯ ನೆನಪು ;
ಪ್ರೇಮಿಯಿದ್ದಳು ನಮಗೆ ಬಾಳನಲ್ಲಿ.

ಕಲ್ಪನೆಯ ರೆಕ್ಕೆಗುದುರೆಯನೇರಿ ದಿಗ್ದಿಗಂ-
ತಕ್ಕೆ ಹಾರಿತು ಅವನ ಭಾವ ಪಾಪ !
ಅವನಿಗವನಿರಲಿಲ್ಲ, ಪ್ರೇಮಿಯನು ನೆನೆನೆನೆದು
ಅವನ ಜೀವನವಾಯ್ತು ಪ್ರೇಮರೂಪ.

ದಿನದಲ್ಲಿ ಹತ್ತು ಸಲ, ತಿಂಗಳಿಗು ಮರೆವಿಲ್ಲ,
ವರುಷವಾದರು ನೆನಪು ಚಿಗುರುತಿತ್ತು.
" ಪ್ರೇಮಿ ಹೋದಳು ಹುಚ್ಚ ! " ಯಾರು ಎಂದರು, ಅವಗೆ
'ನೀವು ಹುಚ್ಚರು' ಎನುವ ಒಗರು ಇತ್ತು.

## ನಮನ

ಮೈಗೆ ಮೈ ಮರೆಯಾದರೇನು ? ಜೀವಕೆ ಜೀವ—
ಜಗವು ಅಳಿದರು ಕೂಡ—ಸತ್ಯ ನಿತ್ಯ.
ಅವನ ಹೃದಯದೊಳಾಕೆ ಬೆಳೆಯುವಳು ದಿನದಿನವು ;
ಕನಸು ಮನಸಿಗು ತೋರಲಿಲ್ಲ ಮಿಥ್ಯ.

ಕೂಸು ಕೂಸೆನ್ನುತಿಹೆ ಏನು ಕೂಸಿನ ಛಲವೊ !
ಮತ್ತೆ ಕೂಸನು ತರುವೆವೆನಲು ಎಂದ,—
" ಆ ಕೂಸ ಕೊಟ್ಟಿನ್ನು ಯಾ ಕೂಸ ತರುವಿರೋ !
ಪ್ರೇಮಿಗಿಂತಲು ಬೇರೆ ಯಾರು ಚೆಂದ ? "

ನಾವೇನ ಮರೆತರೂ, ಅವನೇನ ಮರೆತರೂ,
ಪ್ರೇಮಿಯಿಲ್ಲದ್ದವನ ಪಾಲಿಗಿಲ್ಲ.
ಈರಾರು ಋತುಗಳಲಿ ಯಾರೇನನೆಂದರೂ
ಬೇರೆ ಕಲ್ಪನೆಗವನು ಸೋಲಲಿಲ್ಲ.

" ಪ್ರೇಮಿ ಎಲ್ಲಿಹಳಣ್ಣ ಪ್ರೇಮಿ ಎಲ್ಲಿಹಳು
ಎತ್ತ ಹೋಗಿಹಳಣ್ಣ ಎಂದು ಬಹಳು ? "
" ಎಲ್ಲೆಲ್ಲು ಪೋಗಿಲ್ಲ ಇಲ್ಲೆ ಸಾಕ್ಷಾತ್ತಿಹಳು
ಬಾಳನೀ ಎದೆಯಲ್ಲೆ ಆಕೆ ಮಲಗಿಹಳು. "—

ಎಂದು ನಾನೆನ್ನುತಿರೆ, ಅವನೆದೆಯು ನನ್ನೊಳಗೆ
ಸೇರಿ ತೋರಿತ್ತು ಆ ಎದೆಯೊಳಿದೆಯು
ಎದೆ ಎದೆಗೆ ಬಿಟ್ಟಿಲ್ಲ ; ನಾವು ಒಕ್ಕಲು ಮಾತ್ರ ;
ಎಲ್ಲೆಡೆಗು ಹರಿಯುತಿದೆ ನಿತ್ಯ ಸುಧೆಯು.

## ೪೭. ತೊಕು ಮಾತು

ಆ ಮಾತು ಈ ಮಾತು
ಎಲ್ಲಿಲ್ಲಿ ಸುತ್ತುವ ಮಾತು
ಚಿತ್ತಕ್ಕೆ ಸಿಗದಿರುವ ಹಾರುವಮಾತು.
ಮಾತು ಮಾತಿಗೆ ಬೀಗಿದು
ಮನದ ಮಾತೇ ಉಕ್ಕಿದು
ಇರುಳ ಬೆಳಗಾಗಿಸುವ ನೂರು ಮಾತು.

ಕಿವಿಮಾತು ಸವಿಮಾತು
ಕೂಡಿ ಆಡಿದ ಮಾತು
ನೋಡಿ ಆಡಿದ ಮಾತು ಕಂಡ ಮಾತು.
ತುಂಬಿ ಆಡಿದ ಮಾತು
ನಂಬಿ ಆಡಿದ ಮಾತು
ಕತ್ತಲನು ಬೆಳಗಿಸುವ ಬೆಳಗುಮಾತು.

ಓತು ಆಡಿದ ಮಾತು
ಸೋತು ಆಡಿದ ಮಾತು
ಒಲವಿನೋತಪ್ರೋತವಾದ ಮಾತು.
ಆತುರದ ಕಾತರದ
ಪ್ರೀತಿನೇಹಕೆ ತೆರೆದ
ಆತು ಆಡಿದ ಮಾತು ನೂತ ಮಾತು.

## ನಮನ

ಬಿದ್ದು ಆಡಿದ ಮಾತು
ಎದ್ದು ಆಡಿದ ಮಾತು
ಮುತ್ತಿನಲಿ ಮುತ್ತಿಟ್ಟ ಮುದ್ದುಮಾತು.
ಕಣ್ಮುಚ್ಚಿ ಎದೆ ಬಿಚ್ಚಿ
ಗಲ್ಲ ಗಲ್ಲಃ ಹಚ್ಚಿ
ತೊಟ್ಟುಚ್ಚಿ ಕಳಚಿದಾ ಮೆಚ್ಚುಮಾತು.

ಪ್ರಣಯದ ಬಸಂತದಲಿ
ಮೈನವಿರು ಚಿಗುರುತಿರೆ
ಬೀಜ ಜೀವವು ಬಹದು ಹುಚ್ಚು ಹೂತು.

## ೪೮. ಸ್ವಾತಿ !

ಮುತ್ತು ಬಿತ್ತಿ ಮುತ್ತು ಬೆಳೆದೆ
ಸ್ವಾತಿ, ಚಿತ್ತದಲ್ಲಿಯೂ
ನನ್ನ ಸುತ್ತಲಿಲ್ಲಿಯೂ

ನನ್ನ ನಿನ್ನ ಎದೆಗೆ ಎತ್ತಿ
ತುಟಿಗೆ ತುಟಿಯ ಮುತ್ತನೊತ್ತಿ
ರಸವ ಸೂಸಿ ಪೂಸಿದೆ
ಬಂದ ಗಂಧ ಮೂಸಿದೆ.
ಅದರ ನೆನಪೆ ಗಾಳಿಯಂತೆ
ಪ್ರೇಮವಾಗಿ ಬೀಸಿದೆ.
ಹಿಗ್ಗಿನೊಂದು ಬಿಡದಿಯಾಗಿ
ಅಂಗಾಲಿಗೆ ಹಡದಿಯಾಗಿ
ಹೂವು ಹೂವು ಹಾಸಿದೆ
ಮುತ್ತು....

ನಿನ್ನ ಕಣ್ಣಿನಲ್ಲಿ ನಾನು
ನನ್ನ ಕಣ್ಣಿನಲ್ಲಿ ನೀನು
ಮೂಡಿ ಮೂಡಿ ಮುಳುಗಿರಿ
ಒಳಗೆ ಚಿಕ್ಕೆ ತೊಳಗಿರಿ
ಕುಂಭದಲ್ಲಿ ತುಂಬಿದಂತೆ
ಉಸಿರು ಗಕ್ಕನಿಕ್ಕಿರಿ.
ಯಾರಿಗಾರು ಎನ್ನದಾಗಿ
ಎಲ್ಲವೂನು ತನ್ನದಾಗಿ
ನಗುವು ಉಕ್ಕಿ ಮಿಕ್ಕಿರಿ.
ಮುತ್ತು....

## ನಮನ

ಚಿಕ್ಕೆಗಳಲಿ ಹೂವುಗಳಲಿ
ಬಿಕ್ಕುಗಳಲಿ ನೋವುಗಳಲಿ
ಒಂದು ಸ್ಪಂದಿಸುತ್ತಿದೆ
ಅದುವೆ ಜಗವ ಮುತ್ತಿದೆ
ಈ ವಿನೋದ
ವಿಮಲ ಬೋಧ
ಜೀವ ಮೋದವಾಗಿರೆ

ಬಾಳು ಅರಳಿ ಬಂದಿತು
ತನ್ನ ಮರಳಿ ಹೊಂದಿತು
ತಾನು ಬಾನು ಆಗಿರೆ.

ಮುತ್ತು....

## ೪೯. ನನ್ನದು ಈ ಕನ್ನಡ ನಾಡು

ನನ್ನದು ಈ ಕನ್ನಡ ನಾಡು ನನ್ನದೋ !
ಅವರಿವರದೆಂದು ಎಂದೂ ಎನ್ನದೋ !
ಅದು ನನ್ನದೆಂತು ಹಾಗೇ ನಿನ್ನದೋ !
ನನ್ನದು ಈ ಕನ್ನಡ ನಾಡು
ಈ ಕನ್ನಡ ನಾಡು.

೧

ಕನಸಿಟ್ಟ ತತ್ತಿಗಳ ಗೂಡು ನೋಡದೋ !
ಮೈಗೊಂಡು ಬಂತು ಕಣ್ಣೊಡಿ
ಕುಣಿ ಕುಣಿವ ರೆಕ್ಕೆಯೊಡಗೂಡಿ
ಬೆರಗಾಗಿ ನೋಡುತಿದೆ ರೂಢೀ

ಸರ್ವಾರ್ಥ ಸಿದ್ಧಿ, ಕೇವಲದ ಬುದ್ಧಿ, ಅಂತರ್ಯ ಶುದ್ಧಿ
ಮೈಗೂ ಮುಟ್ಟಿದೆ
ದಿಟವಾದ ನಿಖರ ತಪವಾಗಿ ಪ್ರಖರ ಕೈಲಾಸ ಶಿಖರ-
ವನ್ನೂ ಮೆಟ್ಟಿದೆ
ಅಹ ಏನು ಚೆಂದ ಹಲ ಜನ್ಮಬಂಧ ಸೋಪಾನದಂದ-
ವಾಗಿ ಕಟ್ಟಿದೆ

ವರಹಂಸಯೋಗಿ, ಪರಿಶುದ್ಧ ಭೋಗಿ ಭರತನ್ನಾ ಸಲಿಸಿದೆ,
ಭುಜಬಲವ ಮೆರೆಸಿ ವೈರಾಗ್ಯವಿರಿಸಿ ಗೊಮ್ಮಟನಾ ನಿಲಿಸಿದೆ.
ಸಂಸಾರದಲ್ಲೆ ಭವಭಾರದಲ್ಲೆ ಸ್ತ್ರೀಹೃದಯಾ ಒಲಿಸಿದೆ.

ದಕ್ಷಿಣಕೆ ಬಂದು, ಬೆಳಗೊಳಕೆ ನಿಂದು, ಶ್ರವಣಕ್ಕೆ ಎಂದು
ಸಂದೇಶಾ ಅಟ್ಟಿತೋ.

ನಮನ

ಅವು ಆಗ ತನ್ನ ತಾನರಿದು, ಹೃದಯ ಕಣ್ತೆರೆದು,
ಪೂರ್ವ ಭವಹರಿದು
ಕನ್ನಡವೂ ಹುಟ್ಟಿತೋ
ಇಂತಹದೀ ಕನ್ನಡನಾಡೂ
ನನ್ನದು.

೨

ಕಣಸೆಂದ ಕಾಣ್ಕೆಗಳ ಕೂಟ ಕಂಡೆಯೋ
ಒಂದೊಂದು ಮೂರ್ತಿ ಒಡಮೂಡಿ
ಆವರಣವನ್ನೆ ಒಡಗೂಡಿ—
ಸಾಕ್ಷಾತ್ತು ಆಯ್ತು ಶಿವ ಮೋಡಿ...

ಹಿಮಗಿರಿಯ ಬಾಲೆ ಹೊತ್ತಿಸಿದ ಜ್ವಾಲೆ ಅಹ ಶಿವನ ಲೀಲೆ
ಮತ್ತೂ ಮರಳಿಸಿ
ಅತ್ತತ್ತ ಏಕೆ, ಇತ್ತತ್ತ ಬರಲಿ, ಜಗದತ್ತ ಎಂದು
ಇಳೆಗೂ ಹೊರಳಿಸಿ
ಪಿಂಡಾಂಡದಲ್ಲಿ ಬ್ರಹ್ಮಾಂಡವನ್ನೆ ಉದ್ದಂಡವಾಗಿ
ಹೂ ಹೂ ಅರಳಿಸಿ

ಆ ನಂದಿಯಲ್ಲಿ ಹಲ ಮಂದಿಯಲ್ಲಿ ಯುಗ ಸಂಧಿಯಲ್ಲಿ
ಬಸವನ್ನಾ ಬೆಳಗಿಸಿ
ಅನುಭಾವ ಮೋಡ ಘನದಾಚೆ ನೋಡ ಸಿಡಿಲ್ಮಿಂಚು ಕೂಡ
ಪ್ರಭುವಾಗಿ ಮೊಳಗಿಸಿ
ಇಹದೇವಿಯಾಗಿ, ಮಹದೇವಿಯಾಗಿ, ಬಹತಾಯಿಯಾಗಿ
ಶ್ರೀಶೈಲಾ ತೊಳಗಿಸಿ

ನಮನ

ಕಲ್ಯಾಣ ಕಟ್ಟಿ, ಉಳವಿಯನು ಮುಟ್ಟಿ, ದಿಗ್ದೇಶ ಮೆಟ್ಟಿ
ಲಿಂಗಾಂಗಽ ಅಪ್ಪಿದಾ
ಮಾತೆಲ್ಲ ಜ್ಯೋತಿ, ಸರ್ವಜ್ಞ ರೀತಿ, ಬರಿದೇಕೆ 'ನೀತಿ'
ಭವಿಸಂಗಽ ತಪ್ಪಿದಾ
ಆ ಕನ್ನಡ ನಾಡು
ನನ್ನದು

೩

ಕೈಲಾಸ ಮತ್ತು ವೈಕುಂಠಽ ಎನ್ನದೋ
ಹರಿಹರರ ಒಲವೆ ಒಂದಾಗಿಽ
ಅಘಟಿತಪ ಘಟನೆ ಮುಂದಾಗಿಽ
ಉದ್ಭವದ ಲಿಂಗ ಚೆಂದಾಗಿಽಽಽ

ಶೃಂಗೇರಿ ತುದಿಗೆ, ಶಾರದೆಯ ಎದೆಗೆ, ಆ ಜ್ಞಾನ ನದಿಗೆ
ಪೂರಾ ಬಂದಿರೆ
ಮೇಲ್ಕೋಟೆ ಅಂದ, ಅದು ಪ್ರಣಯಬಂಧ, ಇಲ್ಲದರ ಮುಂದ
ಶ್ರೀಯೋ ಬಂದಿರೆ
ಪಡುಗಡಲ ತಡೆಗೆ ಕನ್ನಡದ ಕಡೆಗೆ ಮುಕ್ತಾತ್ಮರೆಡೆಗೆ
ಕೃಷ್ಣಾ ನಿಂದಿರೆ

ದುಷ್ಟರನು ಒತ್ತಿ, ಶಿಷ್ಟರನು ಎತ್ತಿ, ಧರ್ಮವನೆ ಹತ್ತಿ
ಶುಕರೂಪಾ ಬೇಡಿದಾ
ಎಲ್ಲದರ ಹಿಂದೆ ಆ ಸೂತ್ರ ಒಂದೆ ಭೂಭುವನ ತಂದೆ
ಕವಿಚೈತ್ರಾ ನೋಡಿದಾ
ಬಹುರಾಗವಾಗಿ ಅನುರಾಗ ಮಾಗಿ ಮಧು ಭಕ್ತಿಗಾಗಿ
ದಾಸಾರ್ಯ ಹಾಡಿದಾ

## ನಮನ.

ಮಾಸತಿಯ ಬೀಡು, ಮುಡುಪಾದ ನಾಡು, ಇದಕಾರು ಜೋಡು
ಎತ್ತೂ ಸುತ್ತಲೂ
ಮಲೆಯಾಳ ಮಂದ್ರ ದ್ರಾವಿಡೆವ್ರು ಸಾಂದ್ರ ಮಾರಾಷ್ಟ್ರ ಆಂಧ್ರ
ಸುತ್ತುಽ ಮುತ್ತಲೂ
ಇಗೊ ನಡುವಿನ ಕನ್ನಡ ನಾಡುಽಽ
ನನ್ನದು.

## ನಮುನ—ಕವನಗಳ ಪ್ರಥಮಚರಣಗಳ

### ಅಕ್ಷರಾನುಕ್ರಮಣಿಕೆ

೧೩

# ಸಂದರ್ಭ—ಸೂಚನೆ

೧. ಕವಿ ಹೃದಯವು ಅನಾದಿಕಾಲದಿಂದಲೂ ಭೌಮಜೀವನದಲ್ಲಿ ಸ್ವರ್ಗದ ಚಿಹ್ನವನ್ನು ಕಂಡಿದೆ. ದುರ್ಭಾಗ್ಯದ ಭಾವನೆಗಳು ಸಂಚಾರಿಯಾಗಿ ಬಂದು ಈ ದರ್ಶನದ ಸ್ಥಾಯಿಗೆ ಪೋಷಣೆಯನ್ನೇ ಕೊಡುವವು. ಸದ್ಯದ ಕಾಲದಲ್ಲಿಯೂ ಈ ದರ್ಶನದ ಅವಶ್ಯಕತೆ ಇದೆ.

೨. ಕೂಗುವ ಕೋಗಿಲೆ ಯಾವಾಗಲೂ ಗಂಡು. ಆದರೆ ಒಕ್ಕಲು ಮಗಳ ಅಕ್ಕರೆಯಲ್ಲಿ ಅದು ಹೆಣ್ಣು, ಗೆಳತಿ.

೩-೪-೫. ಭೂಮಿತಾಯಿಯ ದೇವಮಾತಾ ಪದವಿಯನ್ನು ಇಲ್ಲಿ ಪ್ರಕಾಶಿಸಲಾಗಿದೆ.

೬. ಮಳೆಗಾಲದಲ್ಲಿ ತಲೆ ಎತ್ತುವ ಅನಾಮಿಕವಾದ ಪುಷ್ಪಪರಿಷತ್ತಿನ ದಿವ್ಯದರ್ಶನಸ್ಪರ್ಶದಿಂದ ಪುಲಕಿತವಾಗಿ ಈ ಉದ್ಗಾರೋಕ್ತಿ ಬಂದಿದೆ. ಇದರ ಸೌಂದರ್ಯಗ್ರಹಣಕ್ಕೆ ಸಹೃದ ್ಯ ಕಾಣ್ಕೆಯನ್ನು ನೀಡುವುದು ಅಗತ್ಯವಾಗಿದೆ. ಆಗ ಅದು ಪೂರ್ಣ.

೭. ಸುಫಲಿತವಾಗುವ ಬಾಳೆಯ ಜೀವನದ ಮುಕ್ತಾಯವು ಶರಣರ ಮರಣದಂತೆ ಸೂಚಕವಾಗಿರುವುದನ್ನು ಇಲ್ಲಿ ಪ್ರತೀತಿಗೆ ತಂದಿದೆ.

೮-೯. ವಿಪರೀತ ವೇದಾಂತಿಗಳ ಭ್ರಮಂತಿಯನ್ನು; ಸಮಾಜದ ಕಂಟಕರ ಹಗರಣವನ್ನು ವಿಡಂಬಿಸಿದೆ.

೧೦. ಸುಗ್ಗಿಯ ಕಾಲದ ಸಂಭ್ರಮವನ್ನು ಕುಣಿತವಾಗಿ ಕಂಡ ಸೊಗಸನ್ನು ಪ್ರಕಟಿಸಿದೆ.

೧೧. ಹುಸಿ ಹೋದ ಆಷಾಢ ಮಾಸವನ್ನು ಕುರಿತು ಅಂಗಲಾಚಿ ಬೇಡಿಕೊಂಡು ಮೃಗನ ಮಳೆಗಾಗಿ ತಪಿಸುವ ಜೀವಲೋಕದ ವಿಹ್ವಲತೆಯನ್ನು ಬಣ್ಣಿಸಿದೆ.

೧೨. ಅಂದವಾದ ಸಂಸಾರದ ಅನಿರ್ವಚನೀಯವಾದ ಸ್ವರೂಪವನ್ನು ಅನುಭಾವದ ಸಂಕೇತದಿಂದ ಸೂಚಿಸಿದೆ.

೧೩. ಅಂದಗೆಟ್ಟ ಸಂಸಾರದ ಅಡ್ಡಕಥೆಯ ಉಪಹಾಸಕ ಚುಟುಕ.

೧೪. ದುಡ್ಡು ದುಡಿತದ ಗೊಂದಲಿಗರ ಹಾಡು.

೧೫-೧೬. 'ಹೊಸ ಸಂಸಾರ' ಎಂಬ ನಾಟಕದ ನಾಂದಿ. ಭರತ ವಾಕ್ಯದಂತಿರುವ ಸಾಂಕೇತಿಕ ಪದಗಳು.

೧೭. ಶ್ರೀ ಶಂಕರಾಚಾರ್ಯರ ಒಂದು ಸ್ತೋತ್ರದ ಅನುವಾದ.

೧೮ರಿಂದ ೨೩. ಆಂಗ್ಲ ಕವನಗಳ ಆಧಾರದಿಂದ ರಚಿಸಿದ ಪದ್ಯಗಳು.

೨೪. ಕವಿ ಪಂಪನ ಆದಿಪುರಾಣದೊಳಗಿನ ಲಲಿತಾಂಗನ ಹೃದಯದಧಿದೇವಿ ಈಕೆ.

೨೫. ಸ್ವಾಮಿ ಶ್ರದ್ಧಾನಂದರ ಕೊಲೆ ಹಳೆಯ ಮಾತು. ಆದರಿಂದ ಕಲಿಯಬೇಕಾದ ಪಾಠ, ಪಡೆಯಬೇಕಾದ ಎಚ್ಚರ ಮಾನವರಲ್ಲಿ ಮತೀಯ ಅವಿವೇಕ ಇರುವ ವರೆಗೂ ದುರ್ಲಕ್ಷಿಸಲಾಗದು.

೨೬. ಮಹಾತ್ಮಾ ಗಾಂಧಿಯವರು ಎಲ್ಲ ಮುದುಕರಂತೆ ವಯೋವೃದ್ಧರಲ್ಲ; ಜೀವನ ಸಮೃದ್ಧರು.

೨೭. ಕೊಡಗಿನ ಕತೆಗಾರ್ತಿ, ಚಿರಸ್ಮರಣೀಯರಾದ ದಿವಂಗತ ಗೌರಮ್ಮ ಇವರ ಹೃದಯದ್ರಾವಕವಾದ ಅಕಾಲಿಕವಾದ ನಿಧನವನ್ನು ಕುರಿತು ಬರೆದದ್ದು.

೨೮. ಹುತಾತ್ಮರಾದ ಸ್ವಾತಂತ್ರ್ಯವೀರರ ನೆನವಿನಿಂದ ಜೀವನದ ಆದರ್ಶಗಳು ಉಜ್ವಲಿತವಾಗಬೇಕು. ವೈರ ಪ್ರಜ್ವಲಿತವಾಗಬಾರದು.

೨೯-೩೦. ಭಾರತೀಯ ಸ್ವಾತಂತ್ರ್ಯದ ನಿಮಿತ್ತವಾಗಿಯೂ ಸಾಂಕೇತಿಕ ದರ್ಶನದ ಪ್ರೇರಣೆಯಿಂದಲೂ ಬರೆದವುಗಳು.

೩೧ರಿಂದ ೫೦. ವಿವಿಧ ಸ್ವರೂಪಗಳ ಭಾವಗೀತಗಳು.

೩೧ರಿಂದ ೩೮. ಸದ್ಯದ ಸಂಕ್ರಮಣ ಕಾಲವನ್ನು ಕುರಿತು ಬರೆದ ವಿವಿಧ ಭಾವನಾ ಪ್ರಪಂಚದ ಪದ್ಯಗಳು.

## ನಮನ

೩೯. ದುರ್ಮುಖ ಸಂವತ್ಸರವನ್ನು ಕುರಿತು ಬರೆದುದು.

೪೦-೪೧-೪೨. ಸ್ಫುಟವಾಗಿವೆ.

೪೩. ಸೌಂದರ್ಯ ದರ್ಶನದ ಸಂದರ್ಭದಲ್ಲಿಯೂ ಅಪಸ್ವರದಂತೆ ಏಳುವ ಭಾವವನ್ನು ಕುರಿತು.

೪೪-೪೫. ಸ್ಫುಟವಾಗಿವೆ.

೪೬. ಸ್ವಂತ ಕೌಟುಂಬಿಕ ಘಟನೆಯ ಸಂದರ್ಭದಲ್ಲಿ ಬರೆದುದು.

೪೭ರಿಂದ ೫೦. ಭಾವಗೀತಗಳು.

‘ ಅಂಬಿಕಾತನಯದತ್ತ ’ರ

# ಕವನಸಂಕಲನಗಳು

| | |
|---|---|
| ಸೂರ್ಯಪಾನ | ರೂ. ೨.೦೦ |
| ಹೃದಯಸಮುದ್ರ | ೧.೫೦ |
| ಮುಕ್ತಕಂಠ | ೧.೫೦ |
| ಚೈತ್ಯಾಲಯ | ೧.೨೫ |
| ಜೀವಲಹರಿ | ೧.೭೫ |
| ಅರಳು-ಮರಳು (ಮೇಲಿನ ೫ ಸಂಕಲನಗಳ ಗುಚ್ಛ) | ೭.೦೦ |
| ಗಂಗಾವತರಣ | ೧.೫೦ |
| ನಾದಲೀಲೆ | ೧.೫೦ |
| ಮೂರ್ತಿ ಮತ್ತು ಕಾಮಕಸ್ತೂರಿ | ೦.೭೫ |
| ಕೃಷ್ಣಾಕುಮಾರಿ ಮತ್ತು ಹಾಡು-ಪಾಡು | ೧.೦೦ |
| ಮೇಘದೂತ | ೧.೦೦ |
| ಗರಿ | ೨.೫೦ |
| ಸಖೀಗೀತ | ೨.೦೦ |
| ಉಯ್ಯಾಲೆ | ೧.೭೫ |

ದೊರೆಯುವ ಸ್ಥಳ :

**ಸಮಾಜ ಪುಸ್ತಕಾಲಯ, ಧಾರವಾಡ**